ವಿಭೂತಿ ನಿಡಗುಂದಿ, ಧಾರವಾಡದ ಭಿಮಣ್ಣಾ ಗಂಟಿ, ಬಸವರಾಜ ಗಂಟಿ, ಲಕ್ಷ್ಮಣ ಕರಿ, ದುರಗಪ್ಪ ಡೊಕ್ಕಣವರ್, ಬಂಗಾರೆಪ್ಪ ವೆಂಕಟಾಪುರ ಹಾಗೂ ಸರ್ಕಾರಿ ಕಿರಿಯ ಪದವಿಪೂರ್ವ ಮಹಾವಿದ್ಯಾಲಯದ ಅಧ್ಯಾಪಕರುಗಳಾದ ಶ್ರೀಮತಿ ಅನ್ನಪೂರ್ಣ ರಾಚೋಟಿ ಕೊಪ್ಪಳ, ಜೀವನ್ ಗುಂಡ್ನಪಲ್ಲಿ ಜಾವಳಿ, ಮತ್ತು ವಕೀಲರಾದ ಮಲ್ಲಿಕಾರ್ಜುನ ರಾಚೋಟಿ ಸಾಂಬ್ರ, ಎಲ್ಐಸಿ ಪ್ರಥಮದರ್ಜೆಯ ಸಹಾಯಕರಾಗಿ ಸೇವೆಸಲ್ಲಿಸುತ್ತಿರುವ ಚಂದ್ರಶೇಖರ ರಾಚೋಟಿ, ಸಿದ್ಧಯ್ಯ ಸ್ವಾಮಿ ರಾಯಬಾಗ, ಸುಡುಗಾಡು ಸಿದ್ಧ ಸಮಾಜದ ಹಿರಿಯರು, ಮಹಿಳೆಯರು, ಯುವಕರು ಸಮುದಾಯದ ವಿವರಣೆಯನ್ನು ನೀಡಿ, ಸಮುದಾಯಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಮತ್ತು ಪುಸ್ತಕ ಬರೆಯುವುದರಲ್ಲಿ ಸಹಕಾರ ನೀಡಿದ್ದಾರೆ. ಇವರೆಲ್ಲರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕೃತಿಯನ್ನು ಸುಂದರವಾಗಿ ಅಕ್ಷರ ಸಂಯೋಜನೆಗೊಳಿಸಿದ ಕಮಲಾಪುರದ ಭಾವನಾ ಗ್ರಾಫಿಕ್ಸ್‌ನ ಶ್ರೀನಿವಾಸ ಕೆ ಕಲಾಲ್ ಅವರಿಗೂ ಹಾಗೂ ಅಕ್ಷರ ದೋಷಗಳನ್ನು ಸರಿಪಡಿಸಿದ ಡಾ ಆರ್ ಬಿ ಕುಮಾರ್ ಅವರಿಗೆ, ಅಂಕಿಅಂಶಗಳ ಪಟ್ಟಿಯನ್ನು ಸಿದ್ಧಪಡಿಸಿಕೊಟ್ಟ ಸಂಶೋಧಕ ಮಲ್ಲಿಕಾರ್ಜುನ ಮಾನ್ಪಡೆ ರವರಿಗೂ, ಉತ್ತಮ ಛಾಯಾಚಿತ್ರಗಳನ್ನು ಸಂಯೋಜಿಸಿದ ದೇವಲಾಪುರದ ರೋಹಿತ್ ಗ್ರಾಫಿಕ್ಸ್‌ನ ಗಿರೀಶ್ ಅವರಿಗೂ ಚಿರಋಣಿಯಾಗಿದ್ದೇನೆ.

**ಎಂ ಎಸ್ ಗಂಟಿ**

# ಪರಿವಿಡಿ

ಕೋಷ್ಟಕಗಳು



ವೃತ್ತಚಿತ್ರ



ಭೂಪಟ

# ೧

# ಪ್ರವೇಶ

ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು, ಜನಪದ ತಜ್ಞರು ಹೀಗೆ ನಾನಾ ನಮೂನೆಯ ವಿದ್ವಾಂಸರು ಹಿಂದಿನಿಂದಲೂ ಸಮುದಾಯಗಳ ಅಧ್ಯಯನಗಳನ್ನು ನಡೆಸುತ್ತಲೇ ಬಂದಿದ್ದಾರೆ. ಈ ವಿದ್ವಾಂಸರ ಅಧ್ಯಯನಗಳಲ್ಲಿ ಯಾವುದೋ ಒಂದು ಕೊರತೆಯಂತೂ ಕಂಡುಬರುತ್ತದೆ. ಎಷ್ಟೋ ಸಾರಿ ವಿದ್ವಾಂಸರಿಗೆ ಮಾಹಿತಿ ನೀಡುವಾಗ ಸಮುದಾಯದ ಮಾಹಿತಿದಾರರು ಸಂಕೋಚಪಟ್ಟು ಮಾಹಿತಿಗಳನ್ನು ಪೂರ್ಣವಾಗಿ ಕೊಡದೇ ಹೋಗುವ ಸಾಧ್ಯತೆಗಳಿರುತ್ತವೆ. ಕೆಲವೊಮ್ಮೆ ಕೊಟ್ಟ ಮಾಹಿತಿಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಅಧ್ಯಯನಕಾರರು ಸೋಲುವ ಸಾಧ್ಯತೆಗಳೂ ಇರುವುದುಂಟು. ಮಾಹಿತಿಯನ್ನ ತಪ್ಪಾಗಿ ಅರ್ಥೈಸಿಕೊಂಡು ಇನ್ನೊಂದು ಅರ್ಥಬರುವಂತೆ ಅಧ್ಯಯನ ಕೃತಿಗಳಲ್ಲಿ ನಮೂದಿಸಿದ ಉದಾಹರಣೆಗಳೂ ಉಂಟು. ಇಂತಹ ತಪ್ಪುಗಳು ನಡೆದ ಉದಾಹರಣೆಗಳು ಹಿಂದಿನ ಬಹುತೇಕ ಅಧ್ಯಯನಗಳಲ್ಲಿ ಕಾಣಬಹುದಾಗಿದೆ. ಅಂತಹ ತಪ್ಪುಗಳು ನಡೆಯದಂತೆ ಮಾಡಬೇಕೆಂದರೆ, ಅಧ್ಯಯನಗಳಲ್ಲಿ ಸತ್ಯ ಸಂಗತಿಗಳು ಹೆಚ್ಚು ಸ್ಪಷ್ಟವಾಗಿ ಮೂಡಬೇಕೆಂದರೆ ಸಮುದಾಯದ ಒಳಗಿನ ವ್ಯಕ್ತಿಗಳು ಅಧ್ಯಯನ ಕೈಗೊಂಡು ಮಾಹಿತಿ ನೀಡುವುದೇ ಸೂಕ್ತ.

ಕರ್ನಾಟಕದ ಹಾಗೂ ಆಂಧ್ರ ಪ್ರದೇಶಗಳಲ್ಲಿ ಕಂಡುಬರುವ ಸುಡುಗಾಡು ಸಿದ್ಧರು ಅಲೆಮಾರಿ ಸಮುದಾಯಗಳಲ್ಲಿ ಒಬ್ಬರು. ವಿಚಿತ್ರವಾದ ವೇಷ ಭೂಷಣಗಳನ್ನು ಹಾಕಿಕೊಂಡು ಕೈಚಳಕದ ವಿದ್ಯೆಯನ್ನು ಪ್ರದರ್ಶಿಸುತ್ತಾ ಭಿಕ್ಷಾಟನೆ ಮಾಡಿ ಜೀವನ ಸಾಗಿಸುವ ಈ ಸಮುದಾಯ ಜನಸಾಮಾನ್ಯರಿಗೆ ಆಕರ್ಷಣೀಯ ಅತಿಮಾನುಷ ವ್ಯಕ್ತಿಗಳಾಗಿ ಕಂಡುಬರುತ್ತಾರೆ. ಶೈವ ಕಾಳಾಮುಖ, ಕಾಪಾಲಿಕ, ಪಂಥಗಳ ಪಳೆಯುಳಿಕೆಯಂತೆ ಕಂಡುಬರುವ ಈ ಸಮುದಾಯ ಪ್ರಾಚೀನ ಕಾಲದಲ್ಲಿ ಹಲವಾರು ಜಾತಿ ಸಮುದಾಯಗಳನ್ನೊಳಗೊಂಡ ಒಂದು ಪಂಥವಾಗಿದ್ದೂ ಕಾಲಾಂತರದಲ್ಲಿ ಅದೇ ಒಂದು ಪ್ರತ್ಯೇಕವಾದ ಸಮುದಾಯವಾಗಿ ರೂಪುಗೊಂಡಿರುವುದು.

## ಇದುವರೆಗಿನ ಅಧ್ಯಯನಗಳು

೧೨ ಶತಮಾನದ ವಚನಕಾರ ಸಿದ್ಧರಾಮನು ತನ್ನ ವಚನವೊಂದರಲ್ಲಿ

"ಸಿದ್ಧ ಸಿದ್ಧರುಗಳೆಲ್ಲ ರಸವಾದವ ಕಲಿತು

ಬಂಧನಕೆ ಗುರಿಯಾದರು
ಅಮೃತವ ಸೇವಿಸಿದ ಸುರರೆಲ್ಲ
ಪ್ರಳಯಕ್ಕೆ ಗುರಿಯಾದರು" (ತಿಪ್ಪೇರುದ್ರಸ್ವಾಮಿ, ಎಚ್:೧೯೭೫:೩೦೭) ಎಂಬ ಪ್ರಸಿದ್ಧ ವಚನವೊಂದಿದೆ. ಈ ವಚನದಲ್ಲಿ ಸಿದ್ಧರ ಕುರಿತು ತಿಳಿಸಲಾಗಿದೆಯಾದರೂ ಅದು ಸುಡುಗಾಡು ಸಿದ್ಧರನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳಿದ ವಚನವೆನಿಸುವುದಿಲ್ಲ. ಆ ಕಾಲಕ್ಕಾಗಲೇ ಪ್ರಚಲಿತವಿದ್ದ ನಾಥಸಿದ್ಧ ಪರಂಪರೆಯ ಕುರಿತು ವಿಡಂಬಿಸುವ ವಚನ ಇದೆಂದು ಅನಿಸುತ್ತದೆ. ಹಾಗೇ ಬಸವಣ್ಣನವರ ವಚನವೊಂದರಲ್ಲಿ ನಾಥ ಪಂಥದ ಪ್ರಮುಖರಲ್ಲಿ ಒಬ್ಬನಾದ ಗೋಕರನಾಥನ ಕುರಿತು ಉಲ್ಲೇಖವಿದೆ.

"ಒಲೆಯಡಿಯನು ಊಡಿದಡೆ ಹೊಗೆ ಗೋರಕನಾಥನ ಕೊರಳ ಸುತ್ತಿತ್ತು..." (ಬಸವರಾಜು,ಎಲ್:೯೩೦) ಸಿದ್ಧಮತದ ಕುರಿತು ವಿವರಿಸುತ್ತ "ಉತ್ತರ ಕರ್ನಾಟಕದ ಸುಡುಗಾಡು ಸಿದ್ಧರ ಸಿದ್ಧ ಮತದ ಅಸ್ತಿತ್ವವನ್ನು ತೆರೆದು ತೋರಿಸುತ್ತದೆ" (ಕೃಷ್ಣಮೂರ್ತಿ: ೧೯೮೨:೯).

೧೯೩೩ರಲ್ಲಿ ಮುಂಬೈ ಅಧಿಪತ್ಯವು ಮೀಸಲಾತಿ ಪಟ್ಟಿಯನ್ನು ಪ್ರಕಟಿಸಿ ೧೯೪೨ರಲ್ಲಿ ಪರಿಷ್ಕೃತಗೊಳಿಸಿತು. ಈ ಪಟ್ಟಿಯ ಸೆಕ್ಷನ್ ೩. ಇತರೆ ಹಿಂದುಳಿದ ವರ್ಗಗಳ ಪಟ್ಟಿ ಯಲ್ಲಿಯ ಕ್ರ.ಸಂ. ೧೧೧ರಲ್ಲಿ ಸುಡಗಾಡಸಿದ್ಧರ ಪದ ದಾಖಲಾಗಿವೆ.

೧.೫.೧೯೬೦ರಿಂದ ಮೈಸೂರು ರಾಜ್ಯದ ಪರಿಶಿಷ್ಟ ಜಾತಿಯ ಪರಿಸ್ಕೃತ ಪಟ್ಟಿಯ ಕ್ರ.ಸಂ. ೧೫ರಲ್ಲಿ 'ಸುಡುಗಾಡು ಸಿದ್ಧ' (Sudugadu Siddha) ಎಂಬ ಸಮುದಾಯವು ಸೇರಿರುವುದು. ಇದು ಕೊಡಗು, ಬೆಳಗಾವಿ, ಬಿಜಾಪುರ, ಧಾರವಾಡ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಬೀದರ, ಗುಲಬರ್ಗಾ ಮತ್ತು ರಾಯಚೂರು ಹಾಗೂ ಮೈಸೂರು ಜಿಲ್ಲೆಯ ಕೊಳ್ಳೇ ಗಾಲ ತಾಲೂಕು ಹೊರತಾದ ಮೈಸೂರು ರಾಜ್ಯದಲ್ಲಿ ಅನ್ವಯವಾಗುತ್ತಿತ್ತು. ಇದರ ಪ್ರಾದೇಶಿಕ ಮಿತಿಯನ್ನು ೧೯೭೬ರಲ್ಲಿ ಸಡಿಲಿಸಲಾಯಿತು.

ಅನಂತ ಕೃಷ್ಣಅಯ್ಯರ್ ಅವರು ಸುಡುಗಾಡು ಸಿದ್ಧರ ಜಾತಿ ಸಂಪ್ರದಾಯ, ಸಮುದಾಯದ ಆಂತರಿಕ ರಚನೆ, ನ್ಯಾಯ ಪಂಚಾಯತಿ, ಕಸುಬು, ಸಾಮಾಜಿಕ ಸ್ಥಾನಮಾನ ವೇಷಭೂಷಣ ಮುಂತಾದ ವಿಚಾರಗಳನ್ನು ಸ್ಥೂಲವಾಗಿ ವಿವರಿಸಿದ್ದಾರೆ. ತಮ್ಮ ಕೃತಿಯಲ್ಲಿ ಮೈಸೂರು, ಶಿವಮೊಗ್ಗ ಕಡೂರು ಜಿಲ್ಲೆಗಳಲ್ಲಿ ಇವರು ಸಂಚರಿಸುತ್ತಾರೆ ಎಂದು ತಿಳಿಸುತ್ತಾರೆ (೧೯೬೮:Vol-IX)

ಎಡ್ಗರ್ ಥರ್ಸ್ಟನ್ ಅವರು ಸುಡಗಾಡು ಸಿದ್ಧರ ಕುರಿತು "The name is derived from Sudugadu, a burning ground... they intermarry among themselves, and the office of agent is hereditary. They have particular treets of country assigned to them, When on tour collecting burial fees. They can be recognised by the wooden bell in addition to usual metal one, which they always carry about, without this no one would acknowledge the agents right to collect the fees (Therston, E:1975:406).

ಲೂಯಿಸ್‌ರವರು "Caste and Tribes in Mysore City" ಎನ್ನುವ ಕೃತಿಯಲ್ಲಿ ಮೈಸೂರು ನಗರದಲ್ಲಿ ಕಂಡುಬರುವ ಸುಡಗಾಡು ಸಿದ್ಧರ ಕುರಿತು ಮಾಹಿತಿ ನೀಡುತ್ತಾರೆ.

ಸುಡಗಾಡು ಸಿದ್ಧರನ್ನು ಆಂಧ್ರದಲ್ಲಿ 'ಕಾಡುಪಾಪಲ' ಎಂದು ಕರೆಯುತ್ತಾರೆ ಎಂಬುದಾಗಿ ತಿಳಿಸುತ್ತಾ ಅವರ ರೀತಿ, ರಿವಾಜು, ಸಂಪ್ರದಾಯ ಮುಂತಾದವುಗಳನ್ನು ಕುರಿತು ಸಂಕ್ಷಿಪ್ತವಾಗಿ ಮಾಹಿತಿಯನ್ನು ಇಂಡಿಯಾನ್ ಕಮ್ಯುನಿಟಿಸ್ ಪುಸ್ತಕದಲ್ಲಿ ನೀಡಿದ್ದಾರೆ.

ನಿಂಗಣ ಸಣ್ಣಕ್ಕಿಯವರು 'ಐದು ಜಾನಪದ ಕೃತಿಗಳು' ಎಂಬ ಕೃತಿಯಲ್ಲಿ ಬಾಳ ಸಂತೋಷರು ಹಾಗೂ ಸುಡುಗಾಡು ಸಿದ್ಧರು ಮೂಲದಲ್ಲಿ ಬೇರೆ ಬೇರೆ ಜಾತಿ ವೃತ್ತಿ ಮತ್ತು ಪಂಗಡದವರೆಂಬುದನ್ನು ಗಮನಹರಿಸಬೇಕಾಗುತ್ತದೆ. ಕಾಡು ಸಿದ್ಧರು ಮತ್ತು ಸುಡಗಾಡು ಸಿದ್ಧರು ಕುರಂಬ ಕುರುಬ ವಂಶಜರು ಕನ್ನಡ ನೆಲದವರು (ಭಾಸ್ಕರ್,ಎ: ೨೦೦೦:೧೪).

ಬಸವರಾಜ ನೆಲ್ಲಿಸರರು 'ಸುಡಗಾಡು ಸಿದ್ಧರು' ಎನ್ನುವ ಕೃತಿಯಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಬರುವ ಸುಡಗಾಡು ಸಿದ್ಧರ ಕುರಿತು ಸಂಕ್ಷಿಪ್ತ ಮಾಹಿತಿ ನೀಡುತ್ತಾರೆ.

"ಕರ್ನಾಟಕ ಕಲೆಗಳು" ಕೃತಿಯಲ್ಲಿ ಗೊ ರು ಚನ್ನಬಸಪ್ಪನವರು ಸುಡುಗಾಡು ಸಿದ್ಧರ ಕುರಿತು ತಿಳಿಸುತ್ತ ಸುಡುಗಾಡಿನಲ್ಲಿ ವಾಸ ಮಾಡುವವರಾದುದರಿಂದ ಸುಡುಗಾಡು ಸಿದ್ಧರು ಎನ್ನುವ ಹೆಸರು ಈ ಸಮುದಾಯಕ್ಕೆ ಬಂದಿದೆ ಎಂದು ಅಭಿಪ್ರಾಯಪಡುತ್ತಾರೆ (ಚನ್ನಬಸಪ್ಪ: ೧೯೭೭:೧೭೩).

ಉಪಸಂಸ್ಕೃತಿ ಮಾಲೆಯಲ್ಲಿ ಖಂಡೋಬಾ ಅವರ 'ಸುಡುಗಾಡು ಸಿದ್ಧರ ಸಂಸ್ಕೃತಿ' ಎನ್ನುವ ಕೃತಿಯೊಂದು ಬೆಳಕು ಕಂಡಿದೆ(೧೯೯೩). ಈ ಕೃತಿಯಲ್ಲಿ ಸುಡುಗಾಡು ಸಿದ್ಧರ ಕುರಿತ ಮಾಹಿತಿಗಳು ದೊರೆಯುತ್ತವೆ.

ಟಿ ಎಂ ಭಾಸ್ಕರರು ಸುಡುಗಾಡು ಸಿದ್ಧರ ಕುರಿತು ಸಂಶೋಧನೆ ನಡೆಸಿ ಸುಡುಗಾಡು ಸಿದ್ಧರು ಒಂದು ಸಂಸ್ಕೃತಿಕ ಅಧ್ಯಯನ (೨೦೦೦) ಎನ್ನುವ ಕೃತಿಯೊಂದನ್ನು ಹೊರತಂದಿದ್ದಾರೆ. ಅದರಲ್ಲಿ ಸುಡುಗಾಡು ಸಿದ್ಧರ ಕುರಿತು ಮಾಹಿತಿಗಳು ಇದ್ದು ಕೆಲವೊಂದು ಸತ್ಯವಿದ್ದರೆ, ಇನ್ನು ಕೆಲವು ಮಾಹಿತಿಗಳು ಸತ್ಯಕ್ಕೆ ದೂರವಾಗಿವೆ.

ಕರ್ನಾಟಕ ಬುಡಕಟ್ಟುಗಳು ಎಂಬ ಕೃತಿಯಲ್ಲಿ ಪಿ ಕೆ ಖಂಡೋಬಾರವರು "ಸುಡುಗಾಡು ಸಿದ್ಧರು" ಎನ್ನುವ ಲೇಖನದಲ್ಲಿ ಸುಡುಗಾಡು ಸಿದ್ಧರ ಕುರಿತ ಸಂಕ್ಷಿಪ್ತ ಮಾಹಿತಿಗಳನ್ನು ನೀಡಿದ್ದಾರೆ.

ಇವುಗಳಲ್ಲದೆ ಸುಡುಗಾಡು ಸಿದ್ಧರನ್ನು ಕುರಿತು ಬಿಡಿ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. "ಮಸಣದೊಡೆಯರು ನಾವು ಸಿದ್ಧರು" (ಕರಿಶೆಟ್ಟಿ ರುದ್ರಪ್ಪ: ಸಂಯುಕ್ತ ಕರ್ನಾಟಕ:೨೨.೧.೧೯೯೮) ಎನ್ನುವ ಲೇಖನದಲ್ಲಿ ಸುಡುಗಾಡು ಸಿದ್ಧರ ಅಲೆಮಾರಿ ಬದುಕಿನ ರೀತಿನೀತಿಗಳು, ಅವರ ಅಸಾಹಾಯಕತೆಯ ಚಿತ್ರಣ ಕಂಡುಬರುತ್ತದೆ.

ಗ್ರಾಮೀಣ ರಂಜನೆಯೇ ಕಾಯಕವಾಗಿರುವ ಸುಡುಗಾಡು ಸಿದ್ಧರು (ನಿರಂಜನ ಮೂರ್ತಿ) ಎನ್ನುವ ಲೇಖನವು ಸುಧಾ ವಾರಪತ್ರಿಕೆ, ಫೆಬ್ರುವರಿ ೭, ೧೯೯೯ ರಲ್ಲಿ ಪ್ರಕಟಗೊಂಡಿದೆ. ಈ

ಲೇಖನದಲ್ಲಿ ಗ್ರಾಮೀಣ ಭಾಗದಲ್ಲಿ ತಮ್ಮ ಕೈ ಚಳಕದಿಂದ ಸುಡುಗಾಡು ಸಿದ್ಧರು ಹೇಗೆ ರಂಜನೆ ನೀಡುತ್ತಾರೆ ಎನ್ನುವ ಮಾಹಿತಿ ದೊರೆಯುತ್ತದೆ.

ಉತ್ತರ ಕರ್ನಾಟಕದ ಸುಡುಗಾಡು ಸಿದ್ಧರ ಕುರಿತು ಮಾಹಿತಿ ನೀಡುವ ಲೇಖನವೊಂದನ್ನು (ಎನ್ ಬಸವರಾಜ ಗುರುಗುಂಟಾರವರು) 'ಕರ್ಮವೀರ' (೨೮.೩.೧೯೯೯) ವಾರ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

'ಸುಡುಗಾಡು ಸಿದ್ಧರ ಜೋಳಿಗೆಯಲ್ಲೇ ಜಾದು' ಎನ್ನುವ ಲೇಖನವೊಂದು ೫ ಸೆಪ್ಟೆಂಬರ್ ೨೦೦೨ರ ತರಂಗ ವಾರಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಕಿಶನ್‌ರಾವ್ ಕುಲಕರ್ಣಿ ಎನ್ನುವವರು ಬರೆದಿರುವ ಈ ಲೇಖನದಲ್ಲಿ ಸುಡುಗಾಡು ಸಿದ್ಧರ ಕೈಚಳಕದ ಆಟದ ಮೇಲೆ ಹೆಚ್ಚು ಒತ್ತನ್ನು ಕೊಟ್ಟಿರುವುದು ಕಂಡುಬರುತ್ತದೆ.

**ಹೆಸರು ಔಚಿತ್ಯ**

ಸುಡುಗಾಡಸಿದ್ಧರ ಪದವನ್ನು ಕುರಿತು ಕಿಟಲ್ ಅವರು ಸುಡ That burns fire ಸುಡ ನಾಸ, ಸುಡನಾಸಿ ಎಂಬ ಅರ್ಥವನ್ನು ಕೊಟ್ಟಿದ್ದಾರೆ. to burn to rost, to back, to fire as gun to consume to be consumed by fair, to burn to be very hot to be efected with sensation of heat to feel excess of heat to be rosted ಎಂಬ ನಾನಾರ್ಥಗಳಿವೆ (ಕಿಟಲ್:೧೯೮೪, ೧೫೬೬).

ಸುಡು ಎಂಬ ಪದವನ್ನು ಬೇರೆ ಬೇರೆ ರೀತಿಯಲ್ಲಿ ತಿಳಿಸುತ್ತಾ Burning ಸುಡುಗಾಡ, ಸುಡುಗರ Anevil sprit of that burns ignirfattnus ಸುಡುಗಾಡ, ಸುಡುಗಾಡ್ N of sudra and haleya men ಸುಡಗಾಡ, ಪಿತ್ರಕಾನನ ಸ್ಮಶಾನ, ಸುಡಗಾಡಿ Sudra and Holeya women ಸುಡಗಾಡು, ಕಾಡು, ಸ್ಮಶಾನ, ಪಿತ್ರವನ, ಸುಡಬಲಿ 'ನಾಡೆಲ್ಲ ಬಿಟ್ಟರು ಸುಡಗಾಡಬಿಡದು', ಸುಡಗಾಡಿಗೆ ಹೋದ ಹೆಣ ತಿರುಗಿ ಬರದಂತೆ, 'ಸೂಳೆಗೆ ಕೊಟ್ಟ ಹಣ ಸುಡಗಾಡಿಗೆ ಹೋದ ಹೆಣ' (My) ಹೀಗೆ ಸುಡಗಾಡಿನ ಕುರಿತಂತೆ ಅನೇಕ ವಿಚಾರಗಳನ್ನು (ಅದೇ:೧೫೬೭) ಕಿಟೆಲ್ ಅವರು ತಿಳಿಸುತ್ತಾರೆ.

A disagreeable word ಎಂಬ ಕಿಟಿಲ್ ಅವರು ಹೇಳುತ್ತಾ ಸುಡುಗಾಡ ಸಿದ್ಧಪದ ಕುರಿತು ಅದೇ ಪುಟದಲ್ಲಿ ಸುಡುಗಾಡ ಸಿದ್ಧ ಸುಡುನುಡಿ A word that bourns every unkind word ಸೆಡಬಲಿ ಸೊಡಬಲಿ-ಸುಡುಬಾಡು ಎಂದು ಹೇಳಿದ್ದಾರೆ.

ಕಾಡು (Kodu) ಗಾಡು (Godu) ಕುರಿತು ವಿಚಾರ Kadu ಕಾಡ್, ಕಾಡ ಕಾಚ A forest a Jangle A wild ಅರಣ್ಯ, ಕಾನನ, ಪಟು, ಅಡವಿ ವನ ಮುಂತಾದವುಗಳು ಕಾಡು a Jungle fellow a lazy good for nothing man ಕಾಡು-ಅಶ್ವತ್ಥ (ಅದೇ:೪೦೧) ಮುಂತಾದ ಪದಗಳನ್ನು ಕಿಟಲ್ ಅವರು ಹೇಳಿದ್ದಾರೆ. ಸಿದ್ಧ ಪದದ ನಿಷ್ಪತ್ತಿ - ಸಿದ್ಧ ಎಂಬ ಪದವು ಶಬ್ದವಿದು ಎಂದರೆ ಸಂರಾಧ್ಧಾ ಅಥವಾ ಸಿದ್ದತಿ ಎಂಬ ದಾತುವಿನಿಂದ ಹುಟ್ಟಿ ಕೊಂಡಿದೆ. ಓದನ ಸಿದ್ಧ (ಅನ್ನ ತಯ್ಯಾರಾಗಿದೆ) ಸಿದ್ಧಮನ ಪರಿತ್ಯಜ್ಯ ಭಿಕ್ಷಾಮಟತಿ ಧರ್ಮತಿ

ಎಂದರೆ ಸಿದ್ಧವಾದ (ತಯ್ಯಾರಾದ) ಅನ್ನವನ್ನು ಬೇಡಲು ದುರ್ಮತಿ ತಿರುಪಗೆ ಹೊರಟಿದ್ದಾನೆ (ಕೃಷ್ಣಮೂರ್ತಿ:೧೯೮೨:೧) ಈ ಪದ ಸಿದ್ಧ ಎಂದರೆ ಉಣ್ಣಲು ಅಥವಾ ತಿನ್ನಲು ತಯ್ಯಾರಾದ ಮತ್ತುಅಣಿಯಾದ ಎಂಬ ಅರ್ಥಗಳಾಗುತ್ತವೆ.

ಇಷ್ಟಾರ್ಥ ಸಿದ್ಧಿ ಎಂದು ಹೇಳುವಾಗ ಬಯಸಿದ, ಹೇಳಿದ ಇಷ್ಟ, ಮಾಡಿದ, ಇಚ್ಛಿಸಿದ, ಎಂಬೆಲ್ಲ ಪದಗಳು ಸಿದ್ಧಿ ಪದಕ್ಕೆ ಅನ್ವಯಿಸುತ್ತದೆ. ಇವೆಲ್ಲ ತಿಳುವಳಿಕೆಯಿಂದ ಸಿದ್ಧಿ ಎಂದರೆ ಸಂಪೂರ್ಣವಾದ, ಪರಿಪೂರ್ಣವಾದ, ತಾನು ಇಷ್ಟಪಟ್ಟ ಕೆಲಸದಲ್ಲಿ ಗುರಿಯನ್ನು ತಲುಪುವವ, ಸಾಧಿಸಿ ತೋರಿಸುವವ ಎಂಬ ಅರ್ಥಗಳಾಗುತ್ತವೆ. ಶೈವ ಪರಂಪರೆಯಲ್ಲಿ ಕಾಳಾಮುಖಿ, ಕಾಪಾಲಿಕ ಎನ್ನುವ ಶೈವಪಂಥಗಳು ಕಂಡುಬರುತ್ತವೆ. ಈ ಪರಂಪರೆಗೆ ಸೇರಿದ ಸಾಧಕರು ಸ್ಮಶಾನಗಳಲ್ಲಿದ್ದು ಸಾಧನೆ ಮಾಡುವ ವಿಚಾರಗಳು ತಿಳಿದುಬರುತ್ತವೆ. ವಾಮಪಂಥ, ನಾಗಪಂಥಗಳ ಸಾಧಕರೂ ಈ ರೀತಿಯ ಸಾಧನೆಗಳಲ್ಲಿ ತೊಡಗಿರುವುದರ ಬಗ್ಗೆ ತಿಳಿದು ಬರುತ್ತದೆ (ರಹಮತ್ ತರೀಕೆರೆ:೨೦೦೬). ಸುಡುಗಾಡು ಸಿದ್ಧರು ಸಹ ಮೂಲ ಶೈವ ಪರಂಪರೆಗೆ ಸೇರಿದ ಸಮುದಾಯವಾಗಿರಬೇಕು. ಪುರಾಣಗಳ ಅಧ್ಯಯನದಿಂದ ಸಿದ್ಧರು ಪರ್ವತ ವಾಸಿಗಳಾದ ಸಮುದಾಯದವರಾಗಿರಬೇಕೆಂದು ಊಹಿಸಬಹುದು. ಇಲ್ಲೆಲ್ಲ "ಸಿದ್ಧ", ಒಂದು ಸಮುದಾಯವೆಂದು ತೋರುತ್ತದೆ.

ಕಾವ್ಯ ಪುರಾಣ, ವಚನಗಳಲ್ಲಿ ಮತ್ತು ಅನೇಕ ಧಾರ್ಮಿಕ ಗ್ರಂಥಗಳ ಅಧ್ಯಯನದಿಂದ ತಿಳಿದು ಬರುವುದೇನೆಂದರೆ 'ಸಿದ್ಧಿ' ಅಥವಾ 'ಸಿದ್ಧರ' ವಿಚಾರ ಕುರಿತು ಸಾಕಷ್ಟು ಮಾಹಿತಿ ದೊರೆಯುತ್ತದೆ. ಇವುಗಳಿಂದ ಸುಡುಗಾಡಸಿದ್ಧ ಎಂಬ ಪದದ ಅರ್ಥ ಶವದಹನ ಮಾಡುವ ಸ್ಥಳದ ಒಡೆಯರೆಂದು ತಿಳಿಯುತ್ತದೆ. ಸ್ಮಶಾನದ ಒಡೆಯರಾದ ಸುಡುಗಾಡು ಸಿದ್ಧರು ಸ್ಮಸಾನದಲ್ಲಿದ್ದುಕೊಂಡು ಮಂತ್ರ, ಯಂತ್ರ, ತಂತ್ರಗಳಿಗೆ ಸಂಬಂಧಿಸಿದಂತೆ ಸಾಧನೆಯಲ್ಲಿ ತೊಡಗಿ ಸಿದ್ಧಿಗಳಾದರೆಂದು ಹೇಳಬಹುದು.

ಪರ್ಯಾಯ ನಾಮಗಳು

ಸುಡುಗಾಡು ಸಿದ್ಧರು ಒಂದು ಊರಿಂದ ಇನ್ನೊಂದು ಊರಿಗ ಭಿಕ್ಷಾಟನೆಗೆ ಹೋದಾಗ ಆಯಾ ಪ್ರದೇಶಗಳಲ್ಲಿರುವ ಜನರು ಇವರನ್ನು ಬೇರೆ ಬೇರೆ ಪರ್ಯಾಯ ಹೆಸರುಗಳಿಂದ ಕರೆಯುವುದು ಕಂಡುಬರುತ್ತದೆ.

೧. ಸುಡುಗಾಡು ಸಿದ್ಧರು
೨. ಕಾಡುಸಿದ್ದರು
೩. ಮಸಣದ ಒಡೆಯರು
೪. ಸಿದ್ಧಯ್ಯಗಳು
೫. ನಿರಂಜಯ್ಯಗಳು
೬. ಕಾಟಿ ಪಾಪುಲಿ (ಆಂಧ್ರ ತೆಲುಗು)
೭. ಸ್ಮಶಾನದ ಜೋಗಿಗಳು
೮. ಕಾಡುಪಾಪರು
೯. ತೆಲುಗು ಜಂಗಮರು
೧೦. ಭಿಕ್ಷಾಗಾಳ್ಳು
೧೧. ಜಂಗಮ ದೇವರು
೧೨. ಕಟೇರಿಪಾಲಾಯಚಕ (ಆಂಧ್ರ ತೆಲುಗು)
೧೩. ವಲ್ಲಕಾಟೋಳ (ತೆಲುಗು)
೧೪. ಜಂಗಾಲರು

ಕಾಡುಪಾಪರು ತಮ್ಮನ್ನು ಸುಡುಗಾಡುಸಿದ್ಧರೆಂದು ಗುರುತಿಸಿಕೊಂಡಿದ್ದಾರೆ. ಕರ್ನಾಟಕದ ತುಂಬೆಲ್ಲ ಸುಡುಗಾಡ ಸಿದ್ಧ ಮತ್ತು ನಿರಂಜಯ್ಯ ಎಂದು ಕರೆಯುತ್ತಾರೆ.

**ಪೌರಾಣಿಕ ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ**

ಕೆಳಜಾತಿಗಳಲ್ಲಿ ವಿಶೇಷವಾಗಿ ಅಸ್ಪೃಶ್ಯ ಕುಲಗಳಲ್ಲಿ ವಿಫಲವಾದ ಕಥನಗಳು, ಹಾಡುಗಳು ಒಗಟುಗಳು ಹಾಗೂ ಪುರಾಣಗಳು ಅಸ್ತಿತ್ವದಲ್ಲಿವೆ. ಯಾವಾಗಲೂ ಪುರಾಣಗಳು ಕಥೆಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬಿನ್ನವಾಗಿರುತ್ತವೆ.

**ಪುರಾಣಗಳು, ಐತಿಹ್ಯಗಳು** ಪ್ರತಿಯೊಂದು ಜಾತಿಯವರು ಆಚರಿಸುವ ರೂಢಿ ಸಂಪ್ರದಾಯಗಳಲ್ಲಿ ಪುರಾಣ, ಐತಿಹ್ಯ, ಕಥೆಗಳು ಪವಿತ್ರತೆಯ ಸ್ಥಾನವನ್ನು ಪಡೆದುಕೊಂಡಿದೆ. ಇವುಗಳ ಉದ್ದೇಶ ಮನುಷ್ಯನ ನಂಬಿಕೆಗಳನ್ನು ದೃಡಪಡಿಸುವುದೇ ಆಗಿದೆ. ಪುರಾಣ ಕಥೆಗೆ ನಿದರ್ಶಕವಾಗಿ ಸುಡುಗಾಡು ಸಿದ್ದರು ಹೇಳಿದ ನಿರಂಕಾರ ಯುಗ ಎಂಬ ಕಥೆಯನ್ನು ಇಲ್ಲಿ ಕೊಡಲಾಗಿದೆ.

**ನಿರಂಕಾರಯುಗ** ನೀರೆ ನಿರಂಕಾರದಲ್ಲಿ ಜಾಂಬವ ಅರಸನು ಜಂಬು ದ್ವೀಪದ ನಡುಗಡ್ಡೆಯಲ್ಲಿದ್ದನು. ಅಲ್ಲಿ ಅವರ ಮಾವನಾದ ರವಕಂಥನಾಥ ಋಷಿಯು ಇದ್ದನು, ಅವನಿಗೆ ಒಬ್ಬ ಮಗಳು ಇದ್ದಳು ಅವಳ ಹೆಸರು ಗೆಜ್ಜಲಮುನಿ. ವಾಯು ಮಂತ್ರದಲ್ಲಿ ಅವಳು ಹುಟ್ಟಿದಳು. ಮಗಳನ್ನು ಜಾಂಬವನಿಗೆ ಕೊಟ್ಟು ಮದುವೆ ಮಾಡಿದರು. ಜಾಂಬಮುನಿ ಹೆಂಡತಿಯು ಗಂಗೆಯ ಉಪದೇಶದಿಂದ ಏಳು ಮಕ್ಕಳನ್ನು ಹೆತ್ತಳು. ಅವರ ಹೆಸರು ಆಲಮುನಿ, ಕಾಲಮುನಿ, ಕಕ್ಕಮುನಿ ಹೆಪ್ಪಮುನಿ ಕೀಲಮುನಿ ಮತ್ತು ಶಿವಮುನಿ.

ಜಾಂಬುಮುನಿಗೆ ಕನಸುಬಿತ್ತು. ಆ ಕನಸಿನಲ್ಲಿ ನಿನ್ನಲ್ಲಿರುವ ಉರಿ ಗಣ್ಣು, ಉರಿಹಸ್ತ, ತ್ರಿಶೂಲ ಈ ಮೂರು ಕೊಡಬೇಕೆಂದು ಶಿವನಲ್ಲಿ ಬೇಡಿಕೊಂಡನು, ಶಿವನು ಅವನಿಗೆ ಅವೆಲ್ಲವನ್ನು ಕೊಟ್ಟುಹೋದನು. ಅದರಿಂದ ನಾನೇ ಭೂಲೋಕದ ಒಡೆಯನೆಂದು ಜಾಂಬುಮುನಿಯ ಅಹಂಕಾರದಿಂದ ಮೆರೆದನು, ದೇವಲೋಕದಲ್ಲಿರುವ ನಾರದಮುನಿ ಭೂಲೋಕಕ್ಕೆ ಹೊರಟಿದ್ದ ಆ ಸಮಯದಲ್ಲಿ ಜಾಂಬುಮುನಿ ಒದರಾಡುವುದನ್ನು ಕೇಳಿ ಮತ್ತೆ ದೇವಲೋಕಕ್ಕೆ ಮರಳಿ ಪರಮಾತ್ಮ ನಿನ್ನಲ್ಲಿದ್ದ ಉರಿಹಸ್ತ, ಉರಿಗಣ್ಣು, ತ್ರಿಶೂಲ ತೆಗೆದುಕೊಂಡು ಮೂರು ಲೋಕಗಳನ್ನು ಸುಡುವೆನು, ಸುಟ್ಟು ಮೂರುಲೋಕಕ್ಕೆ ಒಡೆಯ ನಾಗುವೆನೆಂದು ಜಾಂಬುಮುನಿ ಕೂಗಾಡತೊಡಿಗಿದ್ದಾನೆ ಎಂದು ಹೇಳಿದ. ಆಗ ಪರಮೇಶ್ವರನು ಗಾಬರಿಯಾಗಿ ಘಾತವಾಯಿತು. ಈಗೇನು ಮಾಡಬೇಕೆಂದು ಕೇಳಿದನು. ಆಗ ನಾರದನು ವಿಷ್ನು, ಬ್ರಹ್ಮನ ಹತ್ತಿರ ನಡೆದ ವಿಷಯದ ಬಗ್ಗೆ ತಿಳಿಸಿದನು. ಅವರು ನಮ್ಮಿಂದ ಆ ವಸ್ತುಗಳನ್ನು ತರುವುದು ಆಗದ ಕೆಲಸ ಎಂದರು. ಆಗ ನಾರದನು ಬಸವಣ್ಣನನ್ನು ಭೇಟಿಯಾಗಿ ನಡೆದ ಘಟನೆಯ ಬಗ್ಗೆ ವಿವರಿಸಿದನು ಆಗ ಬಸವಣ್ಣನು ನಿಮ್ಮ ಆರ್ಶಿವಾದವಿದ್ದರೆ ನಾನು ಹೋಗಿ ತೆಗೆದುಕೊಂಡು ಬರುವೆನೆಂದು ಅಪ್ಪಣೆ ಪಡೆದು ಹೋರಟನು. ಹೋರಡುವಾಗ ವಿಷ್ನು ಬ್ರಹ್ಮ ಪರಮಾತ್ಮ ಮತ್ತು ನಾರದರು ಬಸವಣ್ಣನಿಗೆ ಸುಳ್ಳು ಮಾತನಾಡಿದರೆ ನಮ್ಮ

ಬದುಕುಗಳು ನಮಗೆ ಸಿಗುತ್ತವೆ. ಎಂದು ಹೇಳಿದರು. ಬಸವಣ್ಣನು ಸಮುದ್ರದಲ್ಲಿ ಈಜುತ್ತ ರವಕಂಸ ಮುಟ್ಟಬೇಕಾದರೆ ಆರು ತಿಂಗಳಾಯಿತು. ರವಕಂಸನಿಗೆ ಬಸವಣ್ಣನನ್ನು ಕಂಡು ಬಹಳ ಆನಂದವಾಯಿತು. ಆಹಾ ಆಹಾ ಬಸವಣ್ಣನವರೆ, ನೀವು ಇಲ್ಲಿಗೆ ಏತಕ್ಕಾಗಿ ಬಂದಿರುವಿರಿ ನನಗೆ ಯಾವುದು ಕಷ್ಟವಿಲ್ಲವೆಂದನು. ಆಗ ಬಸವಣ್ಣನು ದೇವಲೋಕದಲ್ಲಿದ್ದ ಪರಮೇಶ್ವರ ತನ್ನ ಉರಿಹಸ್ತ ಉರಿಗಣ್ಣು ತ್ರಿಶೂಲ ನಿನ್ನ ಅಳಿಯನಿಗೆ ಕೊಟ್ಟಿದ್ದಾನೆ. ಅವುಗಳನ್ನು ತೆಗೆದುಕೊಂಡು ಹೋಗುವದಕ್ಕಾಗಿ ಬಂದಿದ್ದೇನೆಂದು ಹೇಳಿದನು. ಇದನ್ನು ಕೇಳಿ ರವಕಂಸನಿಗೆ ಘಾತವಾಯಿತು. ಬಸವಣ್ಣನವರೆ ಅವುಗಳನ್ನು ತೆಗೆದುಕೊಳ್ಳಬೇಕಾದರೆ ನೀವು ಸುಳ್ಳು ಮಾತನಾಡಬೇಕು ಎಂದನು. ಅದರಂತೆ ಬಸವಣ್ಣನು ಜಾಂಬವಿನ ಹತ್ತಿರ ಬಂದು ನಿನ್ನ ಮೂರು ಮಕ್ಕಳಿಗೆ ಈಜು ಕಲಿಸುತ್ತೇನೆ ಎಂದನು. ಅದಕ್ಕೆ ಜಾಂಬುಮುನಿ ನನ್ನ ಮಕ್ಕಳಿಗೆ ಏನಾದರೂ ಘಾತವಾದರೆ ಒಯ್ದು ಬಿಟ್ಟರೆ ಅಂದಾಗ ನಿನ್ನ ಮಕ್ಕಳಿಗೆ ಏನಾದರೂ ಆದರೆ ನನ್ನ ಕುತ್ತಿಗೆ ಕತ್ತರಿಸು ಎಂದು ಹೇಳಿದನು ನನ್ನ ಕತ್ತರಿಸಿದರೆ ಬಂಗಾರದ ಮೂರ್ತಿಯಾಗಿ ನಿಲ್ಲುತ್ತೇನೆ ಎಂದನು. ಆ ಪ್ರಕಾರ ಜಾಂಬವಮುನಿ ಮೂರು ಮಕ್ಕಳನ್ನು ಕೊಟ್ಟನು ಆಲಮುನಿ, ರಕ್ತಮುನಿ, ಹೆಪ್ಪ ಮುನಿಗಳನ್ನು ಕರೆದುಕೊಂಡು ಬಸವಣ್ಣ ಸಮುದ್ರದಲ್ಲಿ ಜಿಗಿದನು. ಆಲಮುನಿಗೆ ಬಾಲವನ್ನು, ಹೆಪ್ಪುಮುನಿಗೆ ಕೊಂಬನ್ನು, ರಕ್ತಮುನಿಗೆ ಇನ್ನೊಂದು ಕೊಂಬನ್ನು ಹಿಡಿಸಿದನು. ಈಜುವಾಗ ಆಲಮುನಿಯು ಬಿದ್ದನು ಆಲಮುನಿಯು ಸತ್ತು ಸಮುದ್ರ ಸೇರಿದಾಗ ಅಲ್ಲೋಲ ಕಲ್ಲೋಲವಾಯಿತು. ರಕ್ತ ಮುನಿಯನ್ನು ಕೊಂದಾಗ ಸಮುದ್ರ ನೀರೆಲ್ಲಾ ರಕ್ತವಾಯ್ತು. ಸಮುದ್ರವು ಹೆಪ್ಪು ಮುನಿಯನ್ನು ಕೊಂದಾಗ ಸಮುದ್ರ ಹೆಪ್ಪುಗಟ್ಟಿತು. ಮತ್ತು ಜಂಬು ದ್ವೀಪ ದೊಡ್ಡದಾಯಿತು. ಇದನ್ನು ಜಾಂಬವ ಋಷಿಯು ನೋಡಿದನು. ಬಸವಣ್ಣನನ್ನು ಕೊಲ್ಲಲು ಬೆನ್ನು ಹತ್ತಿದನು. ಬಸವಣ್ಣನು ತನ್ನ ಬಾಲವನ್ನು ಎತ್ತಿಕೊಂಡು ದೇವಲೋಕಕ್ಕೆ ಬಂದನು ಮತ್ತು ಅಲ್ಲಿ ಎಲ್ಲಾ ವೃತ್ತಾಂತವನ್ನು ಹೇಳಿದನು. ಜಾಂಬುಮುನಿ ಬೆನ್ನು ಹತ್ತಿ ಬರುತ್ತಿದ್ದಾನೆಂದು ಹೇಳಿದನು. ಎಲ್ಲರು ಕೂಡಿ ಪಾರ್ವತಿಯನ್ನು ಕರೆದು ನಿನ್ನ ಅಣ್ಣನಾದ ಡಕ್ಕಣಾಚಾರಿಯ ಪಾದವನ್ನು ಹಿಡಿ ಎಂದು ಹೇಳಿದರು. ಆಗ ನಿನ್ನ ಅಣ್ಣನಿಗೆ ಜಾಂಬವಮುನಿಯ ಮೂರು ಮಕ್ಕಳ ಅವತಾರ ತಾಳೆಂದು ಬೇಡಿಕೊ ಎಂದರು. ಅದನ್ನು ಕೇಳಿ ಪಾರ್ವತಿ ಅಣ್ಣನ ಪಾದಗಳನ್ನು ಹಿಡಿದುಕೊಂಡಳು. ಅಣ್ಣ ತಂಗಿಯ ಮಾತಿಗೆ ಅಪ್ಪಣೆ ಕೊಟ್ಟನು ಅವಳು ಶಿವನಲ್ಲಿ ಹೋಗಿ ವಿಷಯ ಹೇಳಿದಳು. ಎಲ್ಲರೂ ಮಂಗಳ ಲೋಕಕ್ಕೆ ಹೋಗಲು ಸಿದ್ಧರಾದರು ಬರುವಾಗ ಬಸವಣ್ಣನನ್ನು ಕರೆದರು ಆದರೆ ಬಸವಣ್ಣ ಮಾತಿನಂತೆ ನನ್ನ ಶಿರವನ್ನು ಜಾಂಬುಮುನಿಗೆ ಕೊಡತ್ತೇನೆಂದಾಗ ಶಿವಗಣರು ಅವನ ಜೀವ ತೆಗೆದುಕೊಂಡು ಬರಿ ದೇಹ ಮಾತ್ರ ಅಲ್ಲಿ ಬಿಟ್ಟುಹೋದರು. ಅದೇ ಸಮಯದಲ್ಲಿ ಡಕ್ಕಣಚಾರಿ ಅಲ್ಲಿಗೆ ಬಂದು ಬಸವಣ್ಣನನ್ನು ಕೋಲ್ಲಲು ಪ್ರಯತ್ನಿಸಿದನು. ಆಗ ಡಕ್ಕಣಚಾರಿ ಅಪ್ಪಾ ತಪ್ಪಾ ಕೋಪ ಮಾಡಿಕೊಳ್ಳಬೇಡ ಮೂರು ಮಕ್ಕಳ ಅವತಾರವೇ ನಾನು ಎಂದಾಗ ಜಾಂಬವಮುನಿಯು ಇಲ್ಲ ಇವನು ಘಾತಮಾಡಿದ್ದಾನೆ. ಇವನ ಕಾಲನ್ನು ಕಟ್ಟಿ ನಮ್ಮ

ರಾಜ್ಯಕ್ಕೆ ಒಯ್ಯೋಣ ಎಂದರು. ಆಗ ಡಕ್ಕಣಚಾರಿ ನಿನ್ನಿಂದ ಆಗದು ನೀವೇ ಕಾಲುಕಟ್ಟೆಂದನು. ಆಗ ಜಾಂಬವಮುನಿ ತನ್ನಲ್ಲಿದ್ದ ಉರಿಹಸ್ತ ಉರಿಗಣ್ಣು ತ್ರಿಶೂಲ ಕೆಳಗಿಟ್ಟು ಬಸವಣ್ಣನ ಕಾಲುಕಟ್ಟಿದನು. ತರುವಾಯ ಜಾಂಬವಮುನಿ ಹಿಂದಕ್ಕೆ ತಿರುಗಿ ನೋಡಿದಾಗ ಆ ವಸ್ತುಗಳು ಇರಲಿಲ್ಲ. ಪರಮೇಶ್ವರನ ಕೈಯಲ್ಲಿವೆ. ಅವರು ಬಂದರೆ ಸುಟ್ಟು ಬಿಡುತ್ತಾರೆ. ಬಾ ಎಂದು ಜಕ್ಕಣಚಾರಿ ಹೇಳಿದ. ಅದರೂ ಕಟ್ಟಿ ಹೋತ್ತುಕೊಂಡು ಭೂಲೋಕಕ್ಕೆ ಬಂದರು. ಬಸವಣ್ಣನ ರುಂಡವನ್ನು ಕತ್ತರಿಸಿದನು. ಹೊಟ್ಟೆಯನ್ನು ಸೀಳಿ ಚರ್ಮವನ್ನು ತೆಗೆದನು. ಕರುಳಗಳನ್ನು ಸಮುದ್ರದಲ್ಲಿ ಒಗೆದನು. ಮಾಂಸವನ್ನು ತಿನ್ನತೊಡಗಿದನು. ಸಮುದ್ರದಲ್ಲಿದ್ದ ಆ ಕರಳುಗಳು ಬಂಗಾರದ ಜನಿವಾರವಾಯಿತು. ಅದರಲ್ಲಿನ ಪೆಟ್ಟಿಗೆ ಬ್ರಹ್ಮನ ಶಿವಲಿಂಗ ಆಯಿತು. ಜಾಂಬವನಿಗೆ ಚರ್ಮ ಒಂದೇ ನಿಜವಾಗಿ ಉಳಿಯಿತು. ಆನಂತರ ಜಾಂಬಮುನಿಯು ಬಸವಣ್ಣನ ಮೆಲಕು ತನ್ನ ರಂಪಿಗೆಯನ್ನು ಮಾಡಿದನು. ಹಣೆಪಟ್ಟಿ ಅಡಿಗಲ್ಲು ಮಾಡಿದನು. ಕಾಲು ಪಟ್ಟಗಳನ್ನು ಕೊಡಲೆಯನ್ನು ಮಾಡಿದನು. ಪಕ್ಕಡಿಎಲುಬುಗಳನ್ನು ಉಳಿಗಳನ್ನು ಮಾಡಿದನು. ಇದರಂತೆ ತನ್ನ ಉದ್ಯೋಗವನ್ನು ನಡೆಸಿದನು.

೨. ಪರಮೇಶ್ವರನು ತಪಸ್ಸು ಮಾಡುವಾಗ ಅವನ ಸೇವೆಗಾಗಿ ನವಕೋಟಿ ಸಿದ್ದರನ್ನು ಸೃಷ್ಟಿಸಿದರೆಂದು ನಂತರ ವಿಭೂತಿ ರುದ್ರಾಕ್ಷಿ ಕಮಂಡಲ ಗಂಟೆಯನ್ನು ಕೊಟ್ಟು ಭೂಲೋಕಕ್ಕೆ ಕಳಿಸಿದರು ಅವರೆ ಸುಡುಗಾಡು ಸಿದ್ದರು ಎಂದು ಹೇಳುತ್ತಾರೆ.

೩. ಘೋರಕ್ಷ ಎಂಬ ರಾಕ್ಷಸನು ದೇವತೆಗಳಿಗೆ ತುಂಬಾ ತೊಂದರೆ ಕೊಡುತ್ತಿದ್ದನು. ಇವನು ಸಿದ್ದರನ್ನು ತನ್ನ ಮನೆಯ ಕಾವಲಿಗಾಗಿ ಇಟ್ಟುಕೊಂಡಿದ್ದನು ಈ ರಾಕ್ಷಸನ ಕಾಟ ತಾಳಲಾರದೆ ಇವರು ಶಿವನ ಮೊರೆ ಹೋದರು. ಆಗ ಶಿವನು ರೇವಣಸಿದ್ದರನ್ನು ಕಳಿಸಿದನು. ಘೋರಕ್ಷನ ಸಂಹಾರಕ್ಕಾಗಿ ಬರುತ್ತಿದ್ದ ರೇವಣಸಿದ್ದನಿಗೆ ಕಾವಲು ಕಾಯುತ್ತಿದ್ದ ಸಿದ್ದರು ತುಂಬಾ ತೊಂದರೆ ಕೊಡುತ್ತಿದರು. ಕೊನೆಗೆ ಶಿವನು ಸಿಟ್ಟಿನಿಂದ ಉರಿಗಣ್ಣನು ಬಿಟ್ಟು ಎಲ್ಲರನ್ನು ಭಸ್ಮ ಮಾಡಿದ ಕೊನೆಗೆ ಘೋರಕ ರಾಕ್ಷಸನನ್ನು ಸಂವಹರಿಸಿ ಹಿಂದುರಿಗಿ ಬರುವಾಗ ಸ್ಮಶಾನದಲ್ಲಿ ಬೂದಿಯಾಗಿ ಬಿದ್ದ ಸಿದ್ದರನ್ನು ಕಂಡು ಕರುಣೆ ಬಂದು ಬದುಕಿಸಿದನಂತೆ ಅವರ ವಂಶಸ್ಥರೆ ಸುಡುಗಾಡು ಸಿದ್ದರಾದರು ಎಂದು ಹೇಳುತ್ತಾರೆ.

೪. ಕಲ್ಯಾಣಪುರದೊಳಗೆ ವಾಸಿಸುವ ಮಾದರಸ ಮಾದಲಾಬಿಕೆಯೆಂಬ ಶಿವಭಕ್ತರ ಹೊಟ್ಟೆಯಲ್ಲಿ ೧೧೬೦ರಲ್ಲಿ ಬಸವಣ್ಣ ಜನಿಸಿದ. ಆ ಕಾಲಕ್ಕೆ ಬಿಜ್ಜಳನೆಂಬ ಅರಸು ಆಡಳಿತ ನಡೆಸುತ್ತಿದ್ದ ಅವನಿಗೆ ಬಲದೇವನೆಂಬ ಮಂತ್ರಿ ಇದ್ದನು. ಇವನು ಸತ್ತಮೇಲೆ ಬಸವಣ್ಣನನ್ನು ಮಂತ್ರಿ ಪದವಿಗೆ ನೇಮಿಸಿಕೊಂಡರು ಬಸವಣ್ಣನು ಅನೇಕ ಪವಾಡಗಳನ್ನು ಮಾಡಿದ ಅವನನ್ನು ಎರಡನೆಯ ಶಿವ ಎಂದು ಜನರು ನಂಬಿದ್ದರು. ಇದನ್ನು ಪರೀಕ್ಷಿಸುವುದರ ಸಲುವಾಗಿ ಬಿಜ್ಜಳ ಹಾಗೂ ಅವನ ಹೆಂಡತಿ ಬಿಜ್ಜಳಮತಿ ಸೇರಿ, ಕುರಬರ ಜಾತಿಯ ಗಂಡ, ಹೆಂಡತಿಯರನ್ನು ಕರೆಸಿಕೊಂಡು ದಂಪತಿಗಳಿಗೆ ಬಸವಣ್ಣನವರ ಪರೀಕ್ಷೇಯ ವಿಷಯವನ್ನು ತಿಳಿಸಿ, ಬಸವಣ್ಣನವರ ಸತ್ವ ಪರೀಕ್ಷೆಗಾಗಿ ಬಿಜ್ಜಳನು ಯೋಚಿಸಿದಂತೆ ಅವಳ ಗಂಡನಿಗೆ

ಜ್ವರ ಬಂದಿವೆಯೆಂದು ಸುಳ್ಳು ಸುದ್ದಿಯನ್ನು ಹಬ್ಬಿಸಿದಳು. ಆಗ ನಿಜವಾಗಿ ಅವಳ ಗಂಡನಿಗೆ ಜ್ವರ ಕಂಡು ಬಂದವು. ಆಗ ಅವಳು ಗಾಬರಿಯಿಂದ ಬಸವಣ್ಣನವರ ಮುಂದೆ ಬಂದು ವಿಷಯವನ್ನು ತಿಳಿಸಿದಳು ಅಲ್ಲದೆ ಅತೀಜ್ವರದಿಂದ ನನ್ನ ಗಂಡನು ಸತ್ತರು ಸಾಯಬಹುದು ಎಂದು ಹೇಳಿದಳು. ಇದನ್ನು ಅರಿತು ಬಸವಣ್ಣನವರು ನಿನ್ನ ಗಂಡ ಸತ್ತರೆ ನಿನ್ನ ಯಾಹ ಬಿಟ್ಟು ಕೊಡು ಮತ್ತು ಸತ್ತ ಗಂಡನನ್ನು ರುದ್ರಭೂಮಿಗೆ ಹೋಗಿ ಹುಗಿದು ಬಿಡು ಎಂದು ಹೇಳಿದರು. ಬಸವಣ್ಣನವರ ಮಾತಿನಿಂದ ಅವಳು ಗಾಭರಿಗೊಂಡು ಮನೆಗೆ ಬಂದು ನೋಡಲಾಗಿ ಗಂಡ ನಿಜವಾಗಿ ಮೃತಗೊಂಡಿದ್ದನು. ಇದನ್ನು ನೋಡಿ. ಸಹಿಸಲಾಗದೆ ಅವಳು ನೇರವಾಗಿ ತಮ್ಮ ಸಮುದಾಯದ ಹಿರಿಯರೊಂದಿಗೆ ವಿಷಯವನ್ನು ತಿಳಿಸಿದಳು. ಅಲ್ಲದೆ ಕುರುಬ ಜನಾಂಗದ ಮುಖಂಡರು ಅವಳನ್ನು ಕರೆದುಕೊಂಡು ರಾಜನ ಬಳಿ ಹೋದರು. ಅವಳು ನಡೆದ ವಿಷಯವನ್ನು ತಿಳಿಸಿ ನಿಮ್ಮ ಮಾತಿನಂತೆ ನಡೆದುಕೊಂಡಿದಕ್ಕೆ ಇಂದು ನನ್ನ ಗಂಡನನ್ನು ಕಳೆದುಕೊಂಡಿದ್ದೇನೆ. ಮುಂದೆ ನನ್ನ ಗತಿ ಹೇಗೆ  ಎಂದು ಅವರ ಮುಂದೆ ಅಳಹತ್ತಿದಳು. ಆಗ ಬಿಜ್ಜಳ ಅರಸನು ಏನು ತೋಚದಂತೆ ಆಗಿ ಅವಳನ್ನು ಸಂತೈಸಲು ನಿನ್ನ ಹಾಗೂ ನಿನ್ನ ಮಗನಿಗೆ ಸಾಲುವಷ್ಟು ದ್ರವ್ಯವನ್ನು ಕೊಡುತ್ತೇನೆಂದು ಹೇಳಿ ಕಳಿಸಿದರು. ಇತ್ತ ಅರಸನು ಸತ್ಪುರಷನನ್ನು ನಿಂದೆ ಮಾಡಿ ಪಾಪಕ್ಕೆ ಗುರಿಯಾದೆನು. ಎಂದು ಸಮಸ್ತ ಕುರುಬರ ದೈವದ ಜನರೆದುರು ತಿಳಿಸಿದನು. ನಂತರ ಕುರುಬ ಜನರು ಅವಳ ಮನೆಗೆ ಬಂದು ಸತ್ತವನ ಶವ ಸಂಸ್ಕರಕ್ಕೆ ಅನುವು ಮಾಡಹತ್ತಿದರು. ಸತ್ತ ವ್ಯಕ್ತಿಯನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವಾಗ ಬಸವಣ್ಣನವರು ಮನೆಯಲ್ಲಿ ಕುಳಿತಿದ್ದನ್ನು ನೋಡಿ ನಾಲ್ಕಾರು ಪ್ರಮುಖರು ಹೋಗಿ ವಿಷಯವನ್ನು ಅವರ ಗಮನಕ್ಕೆ ತಂದರು. ಆಗ ಮೃತ ಹೊಂದಿದ ಸಿದ್ದನಿಗೆ ಜೀವದಾನ ಮಾಡಿರಿ ಎಂದು ಅದರಿಂದ ತಮ್ಮ ಕೀರ್ತಿಯು ಅಜರಾಮರವಾಗಿ ಉಳಿಯುವದೆಂದು ಬಿನ್ನವಿಸಲು ಅವರ ಬೇಡಿಕೆಯಂತೆ ಬಸವಣ್ಣನವರು ತಮ್ಮ ಹಸ್ತವನ್ನು ಹೆಣದ ಮಸ್ತಕದ ಮೇಲೆ ಇಡಲಾಗಿ ಸತ್ತ ಸಿದ್ದನು ಎದ್ದು ಕುಳಿತನು.

ಸತ್ತವನ ಸಲುವಾಗಿ ಸ್ಮಶಾನದಲ್ಲಿ ತಯಾರಿಸಿದ ಗುಂಡಿಗೆ ಒಂದು ಕುರಿಯನ್ನು ಹಾಕಿ ಸಮಾದಿ ಮಾಡಿದರು. ಸ್ಮಶಾನ ಕಾಯುತ್ತಿದ್ದ ವೀರಬಾಹುಕನಿಗೆ ಎಲ್ಲ ವಿಷಯವನ್ನು ತಿಳಿಸಿ ಕಾಣಿಕೆ ಕೊಡಲು ಮುಂದಾದರೆ ಆಗ ಅವನು, ಸತ್ತವನು ಬದುಕಿದರೆ ಊರಲ್ಲಿ ಉಳಿಸಿ ಕೊಳ್ಳಬಾರದು. ಕಾರಣ ಆತನಿಗೋಸ್ಕರ ಊರ ಹೊರಗಿನ ಸ್ಥಳದಲ್ಲಿ ಒಂದು ಮಠವನ್ನು ಕಟ್ಟಿಸಿ ಇಡಬೇಕು. ಸತ್ತ ಸಿದ್ದ ಸುಡಗಾಡಸಿದ್ದನಾಗಿ ಇಲ್ಲೆ ನೆಲಸಲಿ ಎಂದು ಹೇಳಿದನು. ಅಲ್ಲದೆ ರುದ್ರಭೂಮಿಗೆ ಬರತಕ್ಕಂತಹ ವಸ್ತ್ರ ಕಾಣಿಕೆ ಪಡೆದು ಜೀವನ ಸಾಗಿಸಲು ತಿಳಿಸಿದರು. ಇದರಂತೆ ಮುಂದುವರೆದುಕೊಂಡ ಬಂದು ಅಲ್ಲಿಂದ ಸುಡುಗಾಡು ಸಿದ್ದರ ಸಂತತಿ ಉಗಮ ವಾಯಿತು.

೫. ರುದ್ರ ಭೂಮಿ ಕಾಯಲು ಶಿವನು ರೇವಣಸಿದ್ದನ ಮಗನಾದ ಮರುಳಸಿದ್ದನನ್ನು ನಿಯಮಿಸಿದ್ದನು. ರೇವಣಸಿದ್ದ ತನ್ನ ಮಗನಿಗೆ ಎಲ್ಲ ಬಗೆಯ ವಿದ್ಯೆಯನ್ನು ಕಲಿಸಿದನು.

ಅದರಲ್ಲಿ ಅವನು ಮಂತ್ರ ಯಂತ್ರ ತಂತ್ರಗಳಲ್ಲಿ ಹೆಚ್ಚಿನ ಗಮನ ವಹಿಸಿ ಕಲಿಸಿದನು. ತನ್ನ ತಂದೆಯಿಂದ ಪಡೆದ ವಿದ್ಯೆಯಿಂದ ಮರುಳಸಿದ್ಧ ಸ್ಮಶಾನದಲ್ಲಿ ಹಾಯಾಗಿ ಜೀವಿಸುತ್ತಿದ್ದನು. ಮರುಳಸಿದ್ಧ ತನ್ನ ತಂದೆಯ ನೆನಪಿಗಾಗಿ ತನ್ನ ಮಗನಿಗೆ ರೇವಣ ಸಿದ್ಧ ಎಂದು ನಾಮಕರಣ ಮಾಡಿದನು. ಹೀಗಾಗಿ ಸುಡುಗಾಡುಸಿದ್ಧರು ರೇವಣಸಿದ್ಧನ ಸಂತತಿ ಎಂದು ಹೇಳುತ್ತಾರೆ. ಇದೆಲ್ಲ ನೋಡಲಾಗಿ ಸುಡುಗಾಡುಸಿದ್ಧರ ಮೇಲೆ ಶೈವ ಪರಂಪರೆಯ ದಟ್ಟ ಪ್ರಭಾವವಿದೆ. ಸುಡುಗಾಡು ಸಿದ್ಧರು ವಿಷ್ಣುವಿನ ಆರಾಧಕರು ಹೌದು, ಶಿವನ ಉಪಾಸಕರು ಹೌದು ಎಂದು ಹೇಳುವರು. ಸುಡುಗಾಡು ಸಿದ್ಧರ ಬಗೆಗೆ ಅನೇಕ ಐತಿಹಾಸಿಕ, ಪೌರಾಣಿಕ, ಹಾಗೂ ಶಿವ ಶರಣರ ವಚನಗಳಲ್ಲಿ ಅನೇಕ ಮಾಹಿತಿ ದೊರೆಯುತ್ತವೆ.

ಪ್ರತಿಯೊಂದು ಸಮುದಾಯದ ಮೂಲದ ಬಗೆಗೆ ಜನಪದ ಕತೆಗಳು, ಐತಿಹ್ಯ ಕಾವ್ಯಗಳು ಜನಸಾಮಾನ್ಯರಲ್ಲಿ ಪ್ರಚಲಿತವಿರುವ ಅಂಶಗಳನ್ನು ಪರಿಶೀಲಿಬೇಕಾಗುತ್ತದೆ. ಇವುಗಳ ಸತ್ಯಾಂಶಗಳನ್ನು ನಿರ್ಧರಿಸುವುದು ಕಷ್ಟಸಾಧ್ಯವಾದದ್ದು, ನಿರ್ದಿಷ್ಟವಾದ ಪುರಾವೆಗಳು ಇಲ್ಲದೆ ಇರುವಾಗ ಇವುಗಳ ಮೌಖಿಕ ಅಂಶಗಳನ್ನು ಆಧಾರವಾಗಿಟ್ಟುಕೊಳ್ಳಬಹುದು.

ಸಾಮಾಜಿಕ ಹಿನ್ನೆಲೆ ಕರ್ನಾಟಕ ರಾಜ್ಯದಲ್ಲಿ ಸುಡುಗಾಡುಸಿದ್ಧ ಸಮುದಾಯಕ್ಕೆ ಕಾಡುಸಿದ್ಧರು, ಸುಡುಗಾಡುಸಿದ್ಧ, ಆಂಧ್ರ ಪ್ರದೇಶದ ತೆಲುಗಿನಲ್ಲಿ ಕಾಟೆ ಪಾಪಲು ಕಾಟೆ ಸುಡುಗಾಡು, ಪಾಪಲು ಮಕ್ಕಳು ಸ್ಮಾಶಾನದ ಮಕ್ಕಳು ಎಂದೂ ಮಹಾರಾಷ್ಟ್ರದಲ್ಲಿ ಮಸನ ಜೋಗಿ ಎಂದು ಕರೆಯುತ್ತಾರೆ. ಮಹಾರಾಷ್ಟ್ರದಲ್ಲಿ ಇವರು ಗೌಳಿ ಸಮುದಾಯದ ಮೂಲಕ ಗುರುತಿಸಿಕೊಂಡಿದ್ದಾರೆ. ಗೌಳಿ ಸಮುದಾಯವು ತಮ್ಮ ಉಪಜೀವನಕ್ಕಾಗಿ ಆಕಳು, ಎಮ್ಮೆ ಸಾಕಿಕೊಂಡು ಹೈನುಗಾರಿಕೆಯ ವೃತ್ತಿಯಲ್ಲಿ ತೊಡಗಿರುವುದರಿಂದ ಈ ಜನರ ಸಂಪರ್ಕದಿಂದ ಇವರಿಗೆ ಸಿದ್ಧಗೌಳಿ ಎಂದು ಕರೆಯುವುದುಂಟು. ಸುಡುಗಾಡು ಸಿದ್ಧರು ಕಾಡಿನಿಂದ ನಾಡಿಗೆ ಬಂದವರು. ಕಾಡಿನಲ್ಲಿದ್ದು ಗಡ್ಡೆ ಗೆಣಸು ತಿಂದು ಜೊತೆಗೆ ಬೇಟೆಯಾಡಿ ಜೀವನ ಸಾಗಿಸುತ್ತಿದ್ದರು. ಅಲ್ಲದೆ ಕಾಡಿನಲ್ಲಿರುವ ಗಿಡಮೂಲಿಕೆಗಳನ್ನು ಸಂಗ್ರಹಿಸಿ ನಾಟಿ ಔಷಧವನ್ನು ತಯಾರಿಸಿ ಜನರಿಗೆ ಕೊಡುತ್ತಿದ್ದರು. ದಿನಗಳು ಗತಿಸಿದಂತೆ ಕಾಡಿನಲ್ಲಿದ್ದು ಹೊಟ್ಟೆತುಂಬಿಸಿಕೊಳ್ಳುವದು ಕಷ್ಟದಾಯಕವಾಯಿತು. ಹೀಗಾಗಿ ಕಾಡನ್ನು ತ್ಯಜಿಸಿ ನಾಡಿಗೆ ಬಂದರು. ಮುಂದೆ ಕುಟುಂಬದ ನಿರ್ವಹಣೆಗಾಗಿ ಭಿಕ್ಷಾಟನೆಯನ್ನು ಮಾಡುತ್ತಾ ಅವರು ತಮ್ಮ ಜೀವನವನ್ನು ನಿರ್ವಹಿಸಲು ಅಲೆಮಾರಿಗಳಾಗಿ ಜೀವಿಸಲು ಪ್ರಾರಂಭಿಸಿದರು. ಬಹುತೇಕವಾಗಿ ಊರನ್ನು ಪ್ರವೇಶಿಸುವಾಗ ಗ್ರಾಮಸ್ಥರ ನೆರವು ಸಿಗದೆ ಇರಬಹುದು ಎಂಬ ಕಾರಣಕ್ಕಾಗಿ ಊರಿನ ಹೊರಗೆ ಇವರು ಉಳಿದುಕೊಳ್ಳಲು, ಜನಸಂಪರ್ಕದಿಂದ ದೂರವಿರಲು ಪ್ರಯತ್ನಿಸಿದರು. ಆಯ್ಕೆಮಾಡಿಕೊಂಡ ಸ್ಥಳಗಳು ಯಾವುವು ಎಂದರೆ ಗ್ರಾಮಗಳ ಹೊರಗಿನ ಬಯಲು ಪ್ರದೇಶ, ಗಿಡ, ಮರಗಳ ಅಡಿಯಲ್ಲಿ ತಾವೇ ನಿರ್ಮಿಸಿದ ಗುಡಾರಗಳು ಕವದಿಯ ಡೇರೆ ಹಾಕಿಕೊಂಡು ನೆಲಸಹತ್ತಿದರು. ಊರುಪಟ್ಟಣಗಳಿಂದ ದೂರದಲ್ಲಿರುವ ಸ್ಮಶಾನದಲ್ಲಿಯೇ ಉಳಿದು ಅಲ್ಲಿಯೇ ತಮ್ಮ ಗುಡಿಸಲುಗಳನ್ನು ನಿರ್ಮಿಸಿಕೊಂಡು ಭಿಕ್ಷೆಬೇಡುತ್ತಾ ಜೀವನ ಸಾಗಿಸುತ್ತಾರೆ.

ಇವರು ಊರು ಪ್ರವೇಶ ಮಾಡಿದಾಗ ಜನಸಂಪರ್ಕ ಇರದೆ ಇರುವ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಊರ ಹೊರಗಿನ ಸ್ಮಶಾನಗಳ ಹತ್ತಿರ ಗುಡಾರದ ಮನೆಗಳನ್ನು ರಚಿಸಿಕೊಂಡು ನೆಲಸುತ್ತಾರೆ. ಪ್ರತಿ ಗ್ರಾಮಗಳಲ್ಲೂ ಸ್ಮಶಾನಗಳು ಊರಿಂದ ಬಹಳದೂರ ವಿರುತ್ತವೆ. ಇವರಿಗೆ ಜನ ಸಂಪರ್ಕದಿಂದ ದೂರವಿರಲು, ಹೊರಗೆ ಉಳಿಯಬೇಕಾಯಿತು. ಈ ಜನರು ನೆಲಸಿರುವ ಸ್ಥಳದ ಸಮೀಪ ಸ್ಮಶಾನಗಳಿರುವದರಿಂದ ಸ್ಮಶಾನದ ಸ್ಥಳಕ್ಕೆ ಸಮೀಪದವರಾಗಿ ಕಂಡುಬಂದರು. ಈ ಸಮುದಾಯದ ವಕ್ತೃಗಳು ಮಾತ್ರ ಇದಕ್ಕೆ ವ್ಯತಿರಿಕ್ತ ವಾದ ಹೇಳಿಕೆ ನೀಡಿದರು. ಇಲ್ಲಿಯವರೆಗೆ ಸುಡುಗಾಡುಸಿದ್ದ ಸಮುದಾಯದ ಯಾವ ವ್ಯಕ್ತಿಯೂ ಅಥವಾ ಯಾವ ಕುಟುಂಬವು ಸ್ಮಶಾನದಲ್ಲಿ ಉಳಿದುಕೊಂಡ ನಿದರ್ಶನವಿಲ್ಲ. ಇವರು ತಾವೇ ನಿರ್ಮಿಸಿಕೊಂಡ ಗುಡಾರದ ಮನೆಗಳನ್ನು ಊರಿನ ಬಯಲು ಜಾಗದಲ್ಲಿ ರಚಿಸಿಕೊಂಡು ನೆಲಸುತ್ತಾರೆಯೇ ಹೊರತು ಸ್ಮಶಾನದಲ್ಲಿ ವಾಸಿಸುವುದು ಕಂಡುಬಂದಿಲ್ಲ. ಹಾಗೇ ಊರ ಹೊರಗಿನ ಬಯಲು ಪ್ರದೇಶದಲ್ಲಿ ನೆಲೆಸಿರುವದರಿಂದ ಆ ಪ್ರದೇಶವು ಸ್ಮಶಾನಕ್ಕೆ ಸಮೀಪ ಇರುವದರಿಂದ ಗ್ರಾಮಸ್ತ ಜನರಿಗೆ ಸ್ಮಶಾನ ಕಾಯುವವರು ಎಂದು ಗುರುತಿಸ ಲ್ಪಟ್ಟರು ಮತ್ತು ಈ ಜನರು ತಮ್ಮ ಜೀವನೋಪಯಕ್ಕಾಗಿ ಒಂದು ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಬೇಕಾಯಿತು. ಆಗ ಇವರನ್ನು ಸ್ಮಶಾನ ಕಾಯುವವರು, ಸುಡುಗಾಡು ಕಾಯು ವವರು, ಸುಡುಗಾಡಸಿದ್ದರು ಎಂದು ಕರೆಯುವುದು ರೂಢಿಗೆ ಬಂದಿರಬೇಕೆನಿಸುತ್ತದೆ.

ಸುಡುಗಾಡು ಸಿದ್ಧ ಒಂದು ಜಾತಿಯಾಗುವ ಪೂರ್ವದಲ್ಲಿ ಶೈವ ಮೂಲದ ಒಂದು ಸಾಧಕ ಪಂಥವಾಗಿತ್ತು. ಶೈವರಲ್ಲಿ ಕಾಳಾಮುಖ, ಕಾಪಾಲಿಕ ಪಂಥಗಳು ಈ ಪಂಥದ ಮೇಲೆ ಪ್ರಭಾವ ಬೀರಿರಬಹುದು.

ಹಿಂದೆ ಈ ಸಾಧಕ ಪಂಥದಲ್ಲಿ ಎಲ್ಲಾ ಜಾತಿ ಜನ ಸಮುದಾಯಗಳು ಸೇರಬಹುದಾಗಿತ್ತು. ಅದರಂತೆ ಕುರುಬರೂ ಸೇರಿರಬಹುದು. ಕುರುಬರಂತಹ ಹತ್ತೆಂಟು ಜಾತಿ, ಸಮುದಾಯಗಳು ಸೇರಿದ ಸಾಧಕ ಪಂಥವು ಮುಂದೆ ಯಾವುದೋ ಒಂದು ಹಂತದಲ್ಲಿ ಜಾತಿ ಸ್ವರೂಪ ಪಡೆದು ಒಂದು ಪ್ರತ್ಯೇಕ ಸಮುದಾಯವಾಗಿ ರೂಪುಗೊಂಡಿರಬೇಕು.

ಸಾಧನೆಯ ಅಂಗವಾಗಿ ಭಿಕ್ಷಾಟನೆ ಇದೆ. ಇಂದಿಗೂ ವಾಮ ಪಂಥೀಯರು, ನಾಗಪಂಥೀ ಯರು, ಭಿಕ್ಷಾಟನೆಯನ್ನು ಸಾಧನೆಯ ಅಂಗವೆಂದೇ ಭಾವಿಸಿದ್ದಾರೆ. ಸಾಧಕ ಪರಂಪರೆಯಿಂದ ಜಾತಿಯಾಗಿ ಈ ಸಮುದಾಯ ಮಾರ್ಪಟ್ಟಾಗ ಭಿಕ್ಷಾ ವೃತ್ತಿಯೂ ಅದರೊಂದಿಗೆ ಬಂದಿರ ಬೇಕು. ಆ ಭಿಕ್ಷಾವೃತ್ತಿಯೇ ತಮ್ಮ ಕಾಯಕವೆಂದು ಈ ಸಮುದಾಯ ಭಾವಿಸಿ ಅದರಲ್ಲಿಯೇ ಮುಂದುವರೆದಿರುವ ಸಾಧ್ಯತೆ ಇರಬಹುದು.

ಊರಹೊರಗಿನ ಹಾಗೂ ಸ್ಮಶಾನದ ಸಮೀಪ ನೆಲೆಸಿರುವದರಿಂದ ಇವರು ಸುಡುಗಾಡು ಕಾಯುವವರು ಎಂದು ಅಭಿಪ್ರಾಯಪಟ್ಟಿರಬೇಕು. ಮತ್ತು ಕುಟುಂಬದ ನಿರ್ವಹಣೆಗಾಗಿ ಭಿಕ್ಷೆಯನ್ನು ಪ್ರಧಾನ ಕಾರ್ಯವನ್ನಾಗಿಸಿಕೊಂಡರು. ಇವರು ಜನರನ್ನು ಪ್ರಭಾವಿಸುವ ದಕ್ಕೊಸ್ಕರ ನಾವು ಸ್ಮಶಾನ ಜೋಗಿಗಳು, ಸ್ಮಶಾನ ಕಾಯುವವರು, ಶಿವನ ಮಕ್ಕಳು, ಶಿವನು

ನಮಗೆ ಸ್ಮಶಾನ ಕಾಯುವ ಹೊಣೆಯನ್ನು ದಯಪಾಲಿಸಿದ್ದಾನೆಂದು ಹೇಳಿಕೊಳ್ಳುತ್ತಾ ಊರಿಂದ ಊರಿಗೆ ಬಿಕ್ಷಾಟನೆಯ ಬದಕನ್ನೆ ಸಾಗಿಸುತ್ತಾ ಅಲೆದಾಡುವ ಅಲೆಮಾರಿಗಳಾದರು. ಹೀಗಾಗಿ ಕಾಡುಸಿದ್ದರನ್ನು ಕ್ರಮೇಣವಾಗಿ ಸುಡುಗಾಡುಸಿದ್ದರು ಎನ್ನುವ ಹೆಸರಿನಿಂದ ಕರೆಯಲ್ಪಟ್ಟರು. ಸುಡುಗಾಡುಸಿದ್ದರು ಆಂಧ್ರ ಮೂಲದವರಾಗಿರುವದರಿಂದ ತೆಲುಗು ಭಾಷೆಯ ಪ್ರಭಾವ ಇವರ ಮೇಲೆ ದಟ್ಟವಾಯಿತು.

ಇವರು ಎರಡು ರೀತಿಯ ಭಿಕ್ಷಾಟನೆ ಕಾಯಗಳನ್ನು ಮಾಡುತ್ತಾರೆ. ೧. ಸುಡುಗಾಡುಸಿದ್ದ ಕಾಯಕ ೨. ನಿರಂಜಯ್ಯನ ಕಾಯಕ, ಎರಡೂ ಕಾಯಕಗಳೂ ಬೇರೆ ಬೇರೆಯಾಗಿರುತ್ತವೆ. ಸುಡುಗಾಡುಸಿದ್ದರ ಕಾಯಕದಿಂದ ಭಿಕ್ಷಾಟನೆ ಮಾಡಲು ಅನುಕೂಲವಾಗುವಂತಹ ಮತ್ತು ತಾವು ನೆಲಿಸಿದ ಊರಿನ ಸುತ್ತಮುತ್ತಲ ಗ್ರಾಮಗಳಿಗೆ ಹೋಗಿ ಬರಲು ಅನುಕೂಲವಾದ ಸ್ಥಳಗಳನ್ನೆ ಗ್ರಾಮಗಳನ್ನು ಗುರುತಿಸಿ ಕಾಯಕಗಳನ್ನು ಪ್ರಾರಂಭಿಸುತ್ತಾರೆ. ಕಸುಬಿನ ನಿಯಮ ದಂತೆ ಇವರು ನಸುಕಿನ ಐದು ಗಂಟೆಗೆ ಎದ್ದು ತಮ್ಮಲ್ಲಿರುವ ಎರಡು ಜೋಳಿಗೆ ಕೊಲಿಗೆ ಕಾವಡಿದೆಬ್ಬ ನೇತು ಹಾಕಿಕೊಂಡು ಜೊತೆಗೆ ಇನ್ನೊಂದು ಬೆತ್ತ ಅಂದರೆ ಊರಲ್ಲಿ ಹೋದಾಗ ನಾಯಿಗಳಿಂದ ರಕ್ಷಣೆ ಪಡೆಯುವುದರ ಸಲುವಾಗಿ ಬೆತ್ತವನ್ನು ಉಪಯೋಗಿಸುತ್ತಾರೆ. ಒಂದು ಜೋಳಿಗೆಯನ್ನು ಭಿಕ್ಷೆಯಿಂದ ಪಡೆದ ದವಸಧಾನ್ಯಗಳನ್ನು ಹಾಕಿಕೊಳ್ಳಲು, ಇನ್ನೊಂದು ತಮ್ಮ ಕಸುಬಿನ ಕೈಚಳಕದ ಸಾಮಾನುಗಳನ್ನು ಇಟ್ಟುಕೊಳ್ಳುವದರ ಸಲುವಾಗಿ ಉಪಯೋಗಿ ಸುತ್ತಾರೆ. ಗ್ರಾಮವು ಸಮೀಪಸಿದಂತೆ ಭಿಕ್ಷಾವೇಷವನ್ನು ಧರಿಸಿ ಸಜ್ಜಾಗಲು ಗಿಡಮರದ ಕೆಳಗಡೆ, ಗುಡಿಗುಂಡಾರ ಇಲ್ಲವೆ ಹಳ್ಳ ಕೆರೆಗಳ ದಂಡೆಗಳಲ್ಲಿ ಕುಳಿತುಕೊಂಡು ವೇಷಾಧಾರಿಗಳಾಗುತ್ತಾರೆ. ಮೊದಲು ಕಪಿನಿ ಹಾಕಿಕೊಳ್ಳುತ್ತಾರೆ. ಕಪನಿಯ ಮೇಲೆ ಬಣ್ಣ ಬಟ್ಟೆಗಳಿಂದ ತಯಾರಿಸಿದ ಗಲೀಪುನ್ನು ಧರಿಸುತ್ತಾರೆ. ನಂತರ ಕೊರಳಲ್ಲಿ ೭ ೮ ರುದ್ರಾಕ್ಷಿ ಸರಗಳನ್ನು ಮತ್ತು ಕೈಬೆರಳು ಗಳಿಗೆ ಬಣ್ಣದ ಹರಳಿನಿಂದ ತಯಾರಿಸಿದ ಬೆರಳು ಉಂಗುರಗಳನ್ನು ಹಾಕಿಕೊಳ್ಳತ್ತಾರೆ ನಾಯಕ,ಡಿ ಬಿ ೨೦೦೨ ೧೬೬ . ಬಣ್ಣ ಬಣ್ಣದ ಬಟ್ಟೆಯಿಂದ ಅವರೆ ತಯಾರಿಸಿಕೊಂಡ ಪೇಟಾವನ್ನು ತಲೆಗೆ ಸುತ್ತಿಕೊಂಡು ನಂತರ ನವಿಲಗರಿಗಳಿಂದ ಕಟ್ಟಿದ ಪುಚ್ಚವನ್ನು ತುರಾಯಿ ಪೇಟಾದ ಮೇಲೆ ಸಿಕ್ಕಿಸಿಕೊಂಡಿರುತ್ತಾರೆ. ಅಲ್ಲದೆ ಕೊರಳಲ್ಲಿ ದೇವರ ಮುಖವಾಡಗಳನ್ನು ಹಾಕಿಕೊಂಡು ಮುಖದ ಮೇಲೆ ದಪ್ಪವಾಗಿ ಕಾಣುವ ಹಾಗೆ ವಿಭೂತಿ, ಕುಂಕುಮ, ಕಣ್ಣಿಗೆ ಸುರುಮಾ ಹಚ್ಚಿಕೊಳ್ಳುತ್ತಾರೆ. ಆಮೇಲೆ ಕೊರಳಲ್ಲಿ ಎಡ ಬಲ ಕೆಂಪುವಸ್ತ್ರದಿಂದ ಕಟ್ಟಿದ ಜಂಗುಗಳನ್ನು ಹೆಗಲಮೇಲೆ ಹಾಕಿಕೊಂಡು ಜೋಳಿಗೆಯೊಂದಿಗೆ ಊರನ್ನು ಪ್ರವೇಶಿಸುತ್ತಾರೆ. ಮನೆಗಳ ಮುಂದೆ ಜಂಗನ್ನು ನುಡಿಸುತ್ತಾ ಇದರೊಂದಿಗೆ ದೇವರ ಪದ ಹಾಗೂ ದೇವರ ನಾಮಸ್ಮರಣೆ ಜನರ ತಿಳುವಳಿಕೆಗಾಗಿ ಧರ್ಮದ ವಚನಗಳನ್ನು ಹೇಳುತ್ತಾ ಭಿಕ್ಷೆಕೇಳುತ್ತಾರೆ. ಅಲೆಮಾರಿಗಳಾಗಿ ಊರಿಂದೂರಿಗೆ ಹೋಗಿ ಜನರಿಗೆ ಧರ್ಮದ ಬಗ್ಗೆ, ನಡುವಳಿಕೆಗಳ ಬಗ್ಗೆ ತಿಳುವಳಿಕೆ ನೀಡಿ ಬಸವಣ್ಣ ಅಲ್ಲಮಪ್ರಭು ಚೆನ್ನಬಸವಣ್ಣನವರು ಬೋಧಿಸಿದ ತತ್ವ ಗಳನ್ನು, ಕಾಲಜ್ಞಾನ ಹೇಳಿ ರೇವಣಸಿದ್ದನ ಹೆಸರಿನಲ್ಲಿ ಭಿಕ್ಷೆ ಬೇಡುವ ಈ ಜನರ ಜೀವನ ಒಂದು ರೀತಿಯಲ್ಲಿ ಅರೆ ಅಲೆಮಾರಿತನವೆನ್ನಬಹುದು ಬಸವರಾಜ ನೆಲ್ಲಿಸರ ೧೯೮೮ ೪೩ .

ಈ ಕಾಯಕದ ಜೊತೆಗೆ ಸುಡುಗಾಡುಸಿದ್ದನ ಕೈಚಳಕದಾಟವನ್ನು ಭಿಕ್ಷೆಯ ಜೊತೆಗೆ ಜನರು ಬಯಸಿದಾಗ ಇಲ್ಲವೆ ಬಹಳ ಜನರು ಸೇರುವ ಸ್ಥಳವನ್ನು ಗುರುತಿಸಿಕೊಂಡು ತನ್ನಲ್ಲಿದ್ದ ಕೈಚಳಕದ ವಿದ್ಯೆಯನ್ನು ಪ್ರದರ್ಶಿಸುತ್ತಾರೆ.

ನಿರಂಜಯ್ಯನ ಕಾಯಕ ಮೇಲೆ ತಿಳಿಸಿದ ಸುಡುಗಾಡುಸಿದ್ದನ ಕಾಯಕದಂತೆ ಇದ್ದು ವೇಷ, ಭೂಷಣ ಭಿಕ್ಷೆಬೇಡುವ ಪದ್ಧತಿ ಬೇರೆಯಾಗಿರುತ್ತದೆ. ಈ ಕಾಯದಲ್ಲಿ ಕೂಡಾ ಮುಂಜಾನೆ ನಸುಕಿನ ೫ ಗಂಟೆಗೆ ಎದ್ದು ಗ್ರಾಮಗಳ ಸಮೀಪದಲ್ಲಿರುವ ಗುಡಿ, ಗುಂಡಾರಗಳು ಅಥವಾ ಗಿಡದಡಿಯಲ್ಲಿ ಕುಳಿತು ನಿರಂಜಯ್ಯನ ಪೊಷಾಕು ಧರಿಸಲು ಸನ್ನದ್ಧರಾಗುತ್ತಾರೆ. ಕೆಂಪುಬಣ್ಣದ ಕಪಿನಿ ಹಾಗೂ ಬಣ್ಣ ಬಣ್ಣದ ಗಲೀಪು ಧರಿಸಿ ತೆಲೆಗೆ ಕೆಂಪುಬಣ್ಣದ ಮುಂಡಾಸು ಪಟಗ ರುಮಾಲು ಸುತ್ತಿಕೊಂಡು ಕಿವಿಗಳಿಗೆ ಕರ್ಣಕುಂಡಲ ಕೊರಳಲ್ಲಿ ೭ ರಿಂದ ೮ ರುದ್ರಾಕ್ಷಿ ಸರಗಳು ಮತ್ತು ಕೊರಳಲ್ಲಿ ದೇವರ ಮುಖವಾಡಗಳು, ಕಣ್ಣಿಗೆ ಕಾಡಿಗೆ ಕೆಂಪು ಸುರಮಾ ಹಾಗೂ ಹಣೆಗೆ ವಿಭೂತಿ ಧರಿಸಿಕೊಂಡಿರುತ್ತಾರೆ. ಕೈಯಲ್ಲಿ ಶಂಖು, ಗಂಟೆ ಮತ್ತು ನಸುಕಿನಲ್ಲಿ ಊದಲು ಉಪಯೋಗಿಸಬೇಕಾದ ನಫಿರೆ ಇವುಗಳೊಂದಿಗೆ ತಮ್ಮ ಕಾಯಕದಲ್ಲಿ ನಿರತ ರಾಗುತ್ತಾರೆ.

ಇವರು ಗ್ರಾಮಗಳ ಮನೆಗಳ ಮುಂದು ಭಿಕ್ಷೆ ಕೇಳದೆ ४ ಅಥವಾ ೫ ದಿನಗಳವರೆಗೆ ನಸುಕಿನಲ್ಲಿ ಊರನ್ನು ಪ್ರದಕ್ಷಣೆ ಹಾಕಿ ಈ ಸಮಯದಲ್ಲಿ ದೇವರ ಮೇಲಿನ ಹಾಡು, ದೇವರ ನಾಮಸ್ಮರಣೆ, ಜನರ ತಿಳುವಳಿಕೆಗಾಗಿ ಧರ್ಮದ ಕುರಿತ ವಚನಗಳನ್ನು ಹೇಳುತ್ತಾರೆ. ಇಂತಹ ಸಮಯದಲ್ಲಿ ಗ್ರಾಮದ ಜನರು ಅವರಿಂದ ತಮ್ಮ ಊರಿನ ಬಗ್ಗೆ ಒಳತು ಕೆಡಕು ಕೇಳುವದುಂಟು. ಹೀಗಾಗಿ ಇವರನ್ನು ಕಾಲಜ್ಞಾನದ ಅನುಭವ ಹೊಂದಿದವರು ಎಂದು ಅಭಿಪ್ರಾಯಪಡುತ್ತಾರೆ. ನಂತರ ೬ನೇ ದಿನದಂದು ಪ್ರತಿ ಮನೆಗಳಿಗೆ ಹೋಗಿ ಭಿಕ್ಷೆಯನ್ನು ಪಡೆಯುತ್ತಾರೆ.

ಈ ನಿರಂಜನ ಕಾಯಕ ಮಾಡುವವರು ಬಹಳ ಭಯ ಭಕ್ತಿಯಿಂದ ಕಾಯಕದಲ್ಲಿ ನಿರತರಾಗಿರುತ್ತಾರೆ. ಗ್ರಾಮದ ಜನರು ಈ ಕಾಯಕ ಮಾಡುವವರಿಗೆ ಜಂಗಮ ಸಮಾನರಾಗಿ ರುವವರು ಎಂದು ನಂಬಿದವರಾಗಿರುತ್ತಾರೆ. ಹೀಗಾಗಿ ಈ ಕಾಯಕದಲ್ಲಿ ತೊಡಗುವವರು ಮಾಂಸಹಾರಿಗಳಾಗಿದ್ದರೂ ಸಹ ಮಾಂಸವನ್ನು ಸೇವಿಸುವುದಿಲ್ಲ ಎಂದು ತಿಳಿಸುತ್ತಾರೆ. ಜೊತೆಗೆ ಭಕ್ತಿ ಪೂರ್ವಕವಾಗಿ ಕಾಯಕವನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ.

ಇತ್ತೀಚಿನ ದಿನಗಳಲ್ಲಿ ಈ ಕಾಯಕಗಳೂ ಕಣ್ಮರೆಯಾಗಹತ್ತಿವೆ. ಅಲ್ಲಲ್ಲಿ ಕೆಲವು ಜನರಲ್ಲಿ ಮಾತ್ರ ಇನ್ನು ಈ ಕಾಯಕಗಳು ಉಳಿದುಕೊಂಡು ಬಂದಿರುತ್ತದೆ. ಭವಿಷ್ಯದಲ್ಲಿ ಈ ಕಾಯಕಗಳು ಕಣ್ಮರೆಯಾಗುವ ಸಾಧ್ಯತೆಗಳೇ ಹೆಚ್ಚಾಗಿವೆ. ಆದುದರಿಂದ ಸರಕಾರ ಹಾಗೂ ಸಂಘ ಸಂಸ್ಥೆಗಳು ಈ ಕಲೆಯನ್ನು ಉಳಿಸಿಕೊಳ್ಳುವ ಬಗ್ಗೆ ಎಲ್ಲ ನಿಟ್ಟಿನಿಂದ ಪ್ರಯತ್ನಿಸ ಬೇಕಾಗಿದೆ. ಕಲಾವಂತರನ್ನು ಪೋಷಿಸಿದಾಗ ಮಾತ್ರ ಕಲೆ ಜಿವಂತಿಕೆಯಿಂದ ಇರುತ್ತದೆ. ಇಲ್ಲವಾದಲ್ಲಿ ಮುಂದಿನ ದಿನಮಾನಗಳಲ್ಲಿ ಈ ಜನಾಂಗದ ಕಸಬು ಮತ್ತು ಕಲೆಯನ್ನು ಪುಸ್ತಕಗಳ ಮುಖಾಂತರ ಓದಿ ತಿಳಿದುಕೊಳ್ಳುವ ಸಂದರ್ಭಗಳು ಬರಬಹುದೇನೊ.

## ೨

# ಮೂಲ ಮತ್ತು ಪ್ರಸಾರ

### ಮೂಲಸ್ಥಾನ ವಲಸೆಯ ಮಾರ್ಗ

ಸುಡುಗಾಡುಸಿದ್ದರು ಆಂಧ್ರ ಮೂಲದವರಿದ್ದು ಕ್ರಮೇಣವಾಗಿ ಕರ್ನಾಟಕ. ಮಹಾರಾಷ್ಟ್ರ ರಾಜ್ಯಗಳಿಗೆ ವಲಸೆ ಬಂದಿರಬಹುದು. ಪ್ರಾಯಶಃ ೧೨ನೇ ಶತಮಾನದಿಂದೀಚೆಗೆ ಸಂಚರಿಸುತ್ತಾ ಕರ್ನಾಟಕಕ್ಕೆ ಬಂದಿರಬಹುದೆಂದು ಊಹಿಸಲಾಗಿದೆ. ಇವರಲ್ಲಿ ಗೋಲಕುಂಡ ಕಟ್ಟೆ ಮತ್ತು ಹರಪನಹಳ್ಳಿ ಕಟ್ಟೆ ಮತ್ತು ಗದ್ದಲಕಟ್ಟೆ ಹೀಗೆ ೩ ಕಟ್ಟೆಗಳು ಪ್ರಮುಖವಾಗಿ ಇವರಲ್ಲಿ ಕಂಡುಬರುತ್ತದೆ. ಆಯಾ ಕಟ್ಟೆಯ ವ್ಯಾಪ್ತಿಯಲ್ಲಿ ಬರುವ ಇವರ ಆಚಾರ ವಿಚಾರ ಸಂಪ್ರದಾಯ ನಂಬಿಕೆಗಳು ಒಂದೇ ಇದ್ದು ವೃತ್ತಿಯಲ್ಲಿ ಬೇರೆ ಬೇರೆ ಕಸಬುಗಳನ್ನು ಆಯ್ಕೆ ಮಾಡಿಕೊಂಡಿರುವರು. ಹರಪನಹಳ್ಳಿಕಟ್ಟೆಯ ಜನರು ಸುಡುಗಾಡಸಿದ್ದ ಹಾಗೂ ನಿರಂಜಯ್ಯ ಹೆಸರಿನ ಎರಡು ಕಾಯಕಗಳನ್ನು ಮಾಡುತ್ತಾ ಬಂದಿದ್ದಾರೆ. ಗೋಲಕುಂಡ ಕಟ್ಟೆಯವರ ಆಚಾರ ವಿಚಾರ ಸಂಪ್ರದಾಯ ನಂಬಿಕೆ ರೀತಿ  ನೀತಿಗಳು ಹೊರನೋಟಕ್ಕೆ ಒಂದೇ ಎಂಬಂತೆ ಕಂಡುಬಂದರೂ ಸೂಕ್ಷ್ಮವಾಗಿ ಗಮನಿಸಿದಾಗ ಸ್ವಲ್ಪ ವ್ಯತ್ಯಾಸ ಕಂಡುಬರುತ್ತವೆ. ಹೀಗಾಗಿ ವೃತ್ತಿಯಿಂದ ರಾಮಕೊಂಡರು, ಕುರ್ ಮಾಮಗಳು ಪ್ರಮುಖರು. ಭವಿಷ್ಯಕಾರರಲ್ಲಿ ಕೊಂಡ ಮಾಮಾ ಅಥವಾ ಕುರಮಾಮಾಗಳೆಂದು ಹೆಸರು. ಆದಿ ಶಕ್ತಿ ರಾಮಾವಂಶ ಪ್ರಭಾವದಿಂದ ರಾಮಕೊಂಡರು ಕುರಮಾಮಾಗಳ ವೃತ್ತಿಯನ್ನು ಕೈಕೊಂಡರು. ಗದ್ವಾಲಕಟ್ಟಿಯವರು ಕೂಡಾ ಮೇಲಿನಂತೆ ಎಲ್ಲ ಸಂಪ್ರದಾಯ ಒಂದೇ ಇದ್ದರೂ ಇವರು ಲಕ್ಷೀದೇವಿಯನ್ನು ಅಂಗೈಯಲ್ಲಿ ಹಿಡಿದುಕೊಂಡು ಮುಷ್ಠಿ ಭಿಕ್ಷೆಯನ್ನು ಪ್ರಾರಂಭಿಸಿದರು. ಇವರಿಗೆ ತೆಲುಗಿನಲ್ಲಿ ಜಾಂಬ ವಂತೆಗಾಳ್ಳು ಎಂದು ಕರೆಯುತ್ತಾರೆ. ಇವರು ಆಂಧ್ರದ ನೆಲ್ಲೂರಿಗೆ ಬಂದು ನೆಲಸಿ ನೆಲ್ಲೂರಿ ಜಂಗಾಲು ಎಂದು ಕರೆಸಿಕೊಂಡರು. ಕ್ರಮೇಣ ಇವರು ನೆಲ್ಲೂರಿಯಿಂದ ಗೋವಾ ಮತ್ತು ಮಹಾರಾಷ್ಟ್ರದ ಇಸ್ಲಾಂಪೂರ, ರತ್ನಗಿರಿ, ಸಾಮಂತವಾಡಿ ಈ ಪ್ರದೇಶಗಳಿಗೆ ಹೋಗಿ ನೆಲಸಿದ್ದಾರೆ.

### ಭೌಗೋಳಿಕತೆ

ಸುಡುಗಾಡು ಸಿದ್ದರು ಶ್ರೀಶೈಲ ಮತ್ತು ಅದರ ಸುತ್ತಲಿನ ಗುಡ್ಡಗಾಡಿನಲ್ಲಿ ನೆಲೆಸಿದ್ದರು. ಕಾಡಿನಲ್ಲಿ ಬೆಳೆದ ಗೆಡ್ಡೆ ಗೆಣಸು ತಿಂದು ಜೊತೆಗೆ ಬೇಟೆಯಾಡಿ ಮಾಂಸ ತಿಂದು ಜೀವನ

ಸಾಗಿಸುತ್ತಿದ್ದರು. ನಂತರ ಕಾಡನ್ನು ತ್ಯಜಿಸಿ ನಾಡನ್ನು ಪ್ರವೇಶಿಸಿದರು. ಗುಡ್ಡಗಾಡು ಸಮೀಪದಲ್ಲಿರುವ ಸ್ಥಳಗಳಾದ ಆಂಧ್ರದ ಹೈದರಾಬಾದದ ಕೆಲವು ಭಾಗ ಮತ್ತು ಮೆಹಬೂಬನಗರ, ಸಂಗಾರಡ್ಡಿ, ಶ್ರೀಶೈಲ, ಕರ್ನೂಲ ಜಿಲ್ಲೆಗಳಲ್ಲಿ ನೆಲಸಹತ್ತಿದರು ಕ್ರಮೇಣ ನೆರೆಹೊರೆಯ ರಾಜ್ಯಗಳಾದ ಮಹಾರಾಷ್ಟ್ರ ಕರ್ನಾಟಕ ರಾಜ್ಯಗಳಿಗೆ ವಲಸೆಬಂದರು ಆಂಧ್ರಪ್ರದೇಶವು ಅಲೆಮಾರಿಗಳ ಉಗಮ ತಾಣವೆಂದರೆ ತಪ್ಪಾಗಲಿಕ್ಕಿಲ್ಲ. ಅಲೆಮಾರಿಗಳು ಆಂಧ್ರದವರಾಗಿರುವುದರಿಂದ ಇವರ ಮಾತೃ ಭಾಷೆ ತೆಲಗು. ಇಂದಿಗೂ ಇವರು ತಮ್ಮ ಸಮುದಾಯಗಳಲ್ಲಿ ತೆಲಗು ಮಾತನಾಡುತ್ತಾರೆ. ಕರ್ನಾಟಕದಲ್ಲಿ ಇವರ ಚರಿತ್ರೆ ಪ್ರಾರಂಭವಾಗುವುದು ಹನ್ನೆರಡನೇಯ ಶತಮಾನದ ನಂತರ ಎಂದು ಊಹಿಸಲಾಗಿದೆ. ಕೆಲವು ಕುಟುಂಬಗಳು ಈ ಆಂಧ್ರದ ಅನಂತಪುರದಿಂದ ಚಿತ್ರದುರ್ಗಕ್ಕೆ ಮತ್ತು ಮೆಹಬೂಬನಗರ ಮತ್ತು ಕರ್ನೂಲದಿಂದ ಬಳ್ಳಾರಿ, ರಾಯಚೂರು ನಗರ ಪ್ರದೇಶಗಳಿಗೆ ಬಂದು ನೆಲಸಿದರು ನಂತರ ಇಲ್ಲಿಂದಲೆ ಬೇರೆ ಬೇರೆ ಕಡೆಗೆ ಅಂದರೆ ಗುಲಬರ್ಗಾ ಶಿವಮೊಗ್ಗ, ಹಾಸನ, ಬೆಳಗಾಂವ, ಬಿಜಾಪೂರ, ಧಾರವಾಡ ಹೀಗೆ ಕರ್ನಾಟಕ ತುಂಬೆಲ್ಲಾ ಹಂಚಿಹೋಗಿದ್ದಾರೆ.

### ಪ್ರಸಾರ ನೆಲೆಗಳು

ಇವರು ಕೈಕೊಂಡ ಕಸುಬಿನ ಮೇಲೆ ಇವರನ್ನು ಗುರುತಿಸಿ ಕಾಡಸಿದ್ದರೆಂದು ಕರೆದರು. ಕ್ರಮೇಣ ಇವರು ಜೀನೋಪಾಯಕ್ಕಾಗಿ ಕಾಡನ್ನು ತ್ಯಜಿಸಿ ನಾಡಿಗೆ ಬಂದರು. ಹೀಗಾಗಿ ಆಗಿನ ಸಂಬಂಧದಲ್ಲಿ ಇವರಿಗೆ ಜನರಿಂದ ಮನ್ನಣೆ ಸಿಗದ ಕಾರಣ ಇವರು ಊರಿನೊಳಗೆ ಪ್ರವೇಶಮಾಡದೆ ಗ್ರಾಮ ಪಟ್ಟಣಗಳಿಂದ ದೂರ ಉಳಿದುಕೊಂಡು ಜೀವನ ಸಾಗಿಸಹತ್ತಿದರು. ಅನಿವಾರ್ಯವಾಗಿ ಗ್ರಾಮದ ಊರಿನಲ್ಲಿ ಗಿಡ ಮರಗಳ ಆಶ್ರಯದಲ್ಲಿ ಹಾಗೂ ಬಯಲು ಪ್ರದೇಶಗಳಲ್ಲಿ ತಮ್ಮ ಗುಡಾರಗಳನ್ನು ಹಾಕಿ ನೆಲಸಹತ್ತಿದರು. ಜನರಿಂದ ತಿರಸ್ಕಾರಕ್ಕೆ ಒಳಗಾದ ಸಮುದಾಯವಾಗಿ ರೂಪಗೊಂಡಿತು. ಅಲ್ಲದೆ ಇವರು ಬಯಲು ಪ್ರದೇಶದಲ್ಲಿ ನೆಲಸಿರುವುದರಿಂದ ಇವರು ನೆಲೆಮಾಡಿಕೊಂಡ ಸ್ಥಳಗಳು ಸ್ಮಶಾನದಿಂದ ಸಮೀಪ ಇರುವುದರಿಂದ ಜನರು ಇವರನ್ನು ಕಾಡುಸಿದ್ದರು ಸುಡುಗಾಡು ಸಿದ್ದರೆಂದು ಗುರುತಿಸಿದರು. ಮುಂಬೈ ಪ್ರಾಂತದಲ್ಲಿ ೧೮೮೧ರ ಜನಗಣತಿಯಲ್ಲಿ Sudgadsidh ೩೬೪ ಜನ ದಾಖಲಾಗಿದ್ದಾರೆ.

### ವಲಸೆ ಸ್ಥಿತಿಯ

ಆಂಧ್ರ ಪ್ರದೇಶದಲ್ಲಿ ಜೀವನ ಸಾಗಿಸುವದು ಕಠಿಣವಾದುದರಿಂದ ಜೀನೋಪಾಯಕ್ಕಾಗಿ ಕರ್ನಾಟಕಕ್ಕೆ ವಲಸೆ ಬಂದರು. ಕರ್ನಾಟಕದ ಬಳ್ಳಾರಿ, ರಾಯಚೂರು ಜಿಲ್ಲೆಗಳಿಗೆ ಬಂದು ಹರಪನಹಳ್ಳಿಯನ್ನು ತಮ್ಮ ಕೇಂದ್ರ ಸ್ಥಳವನ್ನಾಗಿ ಆಯ್ಕೆಮಾಡಿಕೊಂಡು ನೂರಾರು ವರುಷಗಳು ಕಳೆದ ನಂತರ ಹರಪನಹಳ್ಳಿಯ ಸುತ್ತಮುತ್ತ ಗ್ರಾಮಗಳಾದ ಹೊಸಕೆರೆ, ಓಬಳಾಪುರ, ಹಂಪಾಪಟ್ಟಣ, ದಸಮಾಪುರ, ಆಣೆಕಲ್ಲ, ಕೊಪ್ಪಳ ಜಿಲ್ಲೆಯ ಕನಕಾಪುರ, ಬುಡಶೆಟ್ನಾಳ, ಕಲಿಕೇರಿ, ಮಾಟಲದಿನ್ನಿ, ಬಸಿರಾಳ ಮತ್ತು ಶಿವಮೊಗ್ಗದ ಮೊರಬನಹಳ್ಳಿ, ದ್ಯಾವನಕೊಪ್ಪ ಗಿಂಗಿವಾಲಾ ಜಾವಳಿ, ಮೈಸೂರು ತರಕೇರಿ, ಚನ್ನರಾಯಪಟ್ಟಣ ಮರಿಯಮ್ಮನಹಳ್ಳಿ,

ಸಿದ್ದರಹಟ್ಟಿ ಧಾರವಾಡ, ಬೆಳಗಾಂವ್ ಮುನವಳ್ಳಿ ಹರ್ಲಾಪೂರ ಘಟಪ್ರಭಾ, ರಾಜಾಪುರ, ಬೀದರ,ಹುಮನಾಬಾದ, ಬಸವ ಕಲ್ಯಾಣ, ಮಂಠಾಳ, ಹಳ್ಳಿಖೇಡಗಳಲ್ಲಿ ನೆಲಸಿದ್ದು ಕಂಡು ಬರುತ್ತದೆ ಮತ್ತು ಈ ಭಾಗದ ಜನರು ಸೋಲ್ಲಾಪುರ ಮಹಾರಾಷ್ಟ್ರದ ಕಡೆಗೆ ಹೋಗಿ ನೆಲಸಿದ್ದಾರೆ. ಇನ್ನು ಕೆಲವು ಕುಟುಂಬಗಳು ಬಸವಕಲ್ಯಾಣ, ತೆಲಗಿ, ಬೆಳಗಾವಿ, ಪೂನಾ, ಬಾಂಬೆ ಪ್ರಾಂತಗಳ ಕಡೆ ವಲಸೆ ಹೋಗಿದ್ದಾರೆ. ಮತ್ತು ಇಲ್ಲಿಂದ ಗೋವಾ, ಸಾವಂತವಾಡಿ, ಖಾನಾಪುರ, ಮಡಗಾಂವನಲ್ಲಿಯೂ ನೆಲಸಿರುತ್ತಾರೆ. ಇವರು ಒಂದಡೆ ನೆಲಸದೆ ಊರಿಂದ ಊರಿಗೆ ಗುಳೆಹೋಗುತ್ತಾರೆ. ಸಂಪೂರ್ಣ ಸಂಚಾರಿ ಸಮುದಾಯದವರಾದ ಇವರು ಭೀಕ್ಷಾಟನೆಯನ್ನು ಮೂಲವಾಗಿಸಿಕೊಂಡು ಜೀವನ ಸಾಗಿಸುತ್ತಾರೆ. ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ಇವರ ಕಾಯಕಗಳು ಬೇರೆ ಬೇರೆಯಾಗಿರುತ್ತವೆ. ರಾಯಚೂರು, ಬಳ್ಳಾರಿ, ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿ ನಿರಂಜನಯ್ಯನ ಕಾಯಕಹೊಂದಿ ಜೀವನ ಮಾಡುತ್ತಾ ಬಂದಿದ್ದಾರೆ ಮತ್ತು ಸುಡುಗಾಡು ಸಿದ್ದರಿಂದ ಗ್ರಾಮದ ಜನರು ನಾಟಿ ಔಷಧಗಳನ್ನು ಪಡೆದು ಕೊಳ್ಳುತ್ತಾರೆ. ಮತ್ತು ಇವರಿಂದ ಜೀವನದ ಆಗುಹೋಗುಗಳ ಬಗ್ಗೆ ಭವಿಷ್ಯವನ್ನು ಕೇಳಿಸಿ ಕೊಳ್ಳುತ್ತಾರೆ.

ಇತ್ತೀಚೆಗೆ ಸುಡುಗಾಡು ಸಿದ್ದರು ಭಿಕ್ಷಾಟನೆ ಮಾಡುವುದನ್ನು ಕಡಿಮೆಗೊಳಿಸಿದ್ದಾರೆ. ಹಾಗೂ ಊರಿಂದೂರಿಗೆ ಅಲೆದಾಡುವುದನ್ನು ಕಡಿಮೆಮಾಡಿದ್ದಾರೆ. ಇವರು ತಮಗೆ ಅನುಕೂಲ ವಾದ ಗ್ರಾಮಗಳನ್ನು ಗುರುತಿಸಿಕೊಂಡು ಸಮೀಪದ ಸಂಬಂಧಿಕರೊಂದಿಗೆ ಗುಂಪು ಕುಟುಂಬ ಗಳೊಂದಿಗೆ ಒಂದೆಡೆ ನೆಲಸಿದ್ದಾರೆ. ನೆಲಸಿದ ಗ್ರಾಮಗಳಲ್ಲಿ ಕೃಷಿ, ಕೂಲಿ, ಸಣ್ಣ ಪುಟ್ಟ ವ್ಯಾಪಾರ ಮತ್ತು ಹೆಣ್ಣುಮಕ್ಕಳು ಕೂಲಿಕೆಲಸಕ್ಕೆ ಬಿಡುವಿನ ವೇಳೆಯಲ್ಲಿ ಚಾಪೆ ಹೆಣೆಯುವದು ಹೀಗೆ ಬೇರೆ ಬೇರೆ ವೃತ್ತಿಗಳನ್ನು ಮಾಡುತ್ತಾ ತಮ್ಮ ಜೀವನ ಸಾಗಿಸುತ್ತಿದ್ದಾರೆ. ಇನ್ನೂ ಕೆಲವು ಕುಟುಂಬಗಳು ಮುಂದುವರೆದು ತುಂಡು ಭೂಮಿಗಳನ್ನು ಖರೀದಿಸಿ ಕೃಷಿಯನ್ನು ಮಾಡುತ್ತಿದ್ದಾರೆ.

ಸುಡುಗಾಡು ಸಿದ್ಧ ಸಮುದಾಯ ಕರ್ನಾಟಕದ ೨೫ ಜಿಲ್ಲೆಗಳಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ೧೧ ಜಿಲ್ಲೆಗಳನ್ನು ಮಾತ್ರ ಸಮೀಕ್ಷೆಗೊಳಪಡಿಸಲಾಗಿದೆ. ಸಮೀಕ್ಷೆಯ ಪ್ರಕಾರ ಬಾಗಲಕೋಟೆ ಜಿಲ್ಲೆಯಲ್ಲಿ ಅತಿ ಹೆಚ್ಚಿನ ಜನಸಂಖ್ಯೆ ಕಂಡುಬರುತ್ತದೆ. ಬೆಂಗಳೂರು ಮತ್ತು ಗುಲಬರ್ಗಾ ಜಿಲ್ಲೆಗಳಲ್ಲಿ ಅತಿ ಕಡಿಮೆ ಜನಸಂಖ್ಯೆ ಕಂಡುಬರುತ್ತದೆ. ಜಿಲ್ಲಾವಾರು ಹಾಗೂ ಕುಟುಂಬವಾರು ಜನಸಂಖ್ಯೆ ವಿವರಗಳು ಈ ಕೆಳಗಿನಂತಿವೆ.

ಕರ್ನಾಟಕ ರಾಜ್ಯದಲ್ಲಿ ಸುಡುಗಾಡು ಸಿದ್ಧರನ್ನು ನಿರಂಜಯ್ಯಗಳು, ಕಾಡುಸಿದ್ಧರು, ಮಸಣದ ಒಡೆಯರು, ಸಿದ್ಧಯ್ಯಗಳು, ಕಾಟಿಪಾಪುಲಿ, ಸ್ಮಶಾನದ ಜೋಗಿಗಳು, ಕಾಡು ಪಾಪರು, ತೆಲುಗು ಜಂಗಮರು, ಜಂಗಮ ದೇವರು, ಜಂಗಾಲರು ಇತ್ಯಾದಿ ಹೆಸರುಗಳಿಂದಲೂ ಸ್ಥಳೀಯರು ಕರೆಯುವುದುಂಟು. ೨೦೦೧ರ ಜನಗಣತಿಯಲ್ಲಿ ಕರ್ನಾಟಕ ರಾಜ್ಯದ ಸುಡುಗಾಡು ಸಿದ್ಧ ಜನಸಂಖ್ಯೆ ೨೧೩೩೧ ಎಂದು ದಾಖಲಿಸಲಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಅಂಶಿಕ ಸಮೀಕ್ಷೆಯ ವಿವರ ಹೀಗಿದೆ (ಕೋಷ್ಟಕ:೨.೧).

ಕೋಷ್ಟಕ: ೨.೧

ಸಮೀಕ್ಷೆಗೊಳಪಟ್ಟ ಸುಡುಗಾಡುಸಿದ್ಧರ ಲಿಂಗವಾರು ಜನಸಂಖ್ಯೆ (೨೦೦೭)

| ಸಂ. | ಜಿಲ್ಲೆ | ಕುಟುಂಬ | ಒಟ್ಟು | ಗಂಡು | ಹೆಣ್ಣು |
|---|---|---|---|---|---|
| ೧ | ಬಾಗಲಕೋಟೆ | ೩೩೬ | ೧೫೬೭ | ೮೦೮ | ೭೫೯ |
| ೨ | ಬೆಂಗಳೂರು | ೯೦ | ೩೯೬ | ೨೦೧ | ೧೯೫ |
| ೩ | ಬೆಳಗಾವಿ | ೨೯೮ | ೧೨೯೦ | ೬೭೮ | ೬೧೨ |
| ೪ | ಬಳ್ಳಾರಿ | ೧೦೪ | ೪೪೧ | ೨೨೭ | ೨೧೪ |
| ೫ | ಧಾರವಾಡ | ೭೯ | ೩೮೫ | ೨೦೦ | ೧೮೫ |
| ೬ | ಗದಗ | ೧೧೬ | ೪೯೯ | ೨೫೬ | ೨೪೩ |
| ೭ | ಗುಲಬರ್ಗಾ | ೫೮ | ೩೭೬ | ೨೦೧ | ೧೭೫ |
| ೮ | ಹಾಸನ | ೨೬೯ | ೧೩೫೩ | ೬೯೬ | ೬೫೭ |
| ೯ | ಹಾವೇರಿ | ೨೪೯ | ೧೧೯೭ | ೬೫೦ | ೫೪೭ |
| ೧೦ | ಕೊಪ್ಪಳ | ೧೮೭ | ೯೨೯ | ೪೮೨ | ೪೪೭ |
| ೧೧ | ರಾಯಚೂರು | ೧೪೬ | ೬೯೦ | ೩೬೨ | ೩೨೮ |
| | ಒಟ್ಟು | ೧೯೩೨ | ೯೧೨೩ | ೪೭೬೧ | ೪೩೬೨ |

### ಗ್ರಾಮೀಣ, ನಗರ ಜನಸಂಖ್ಯೆ

ಸುಡುಗಾಡುಸಿದ್ಧ ಸಮುದಾಯವು ಗ್ರಾಮಂತರ ಪ್ರದೇಶಕ್ಕಿಂತ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸವಾಗಿರುವುದು. ನಗರಗಳ ಕೊಳಗೇರಿಗಳಲ್ಲಿ ಅಥವಾ ಬಯಲು ಜಾಗಗಳಲ್ಲಿ ಗುಡಾರ ಇಲ್ಲವೆ ಚಿಕ್ಕ ಗುಡಿಸಲುಗಳನ್ನು ಹಾಕಿಕೊಂಡು ಜೀವನ ನಿರ್ವಹಣೆ ಮಾಡುವುದನ್ನು ಕಾಣಬಹುದಾಗಿದೆ. ಕರ್ನಾಟಕದ ಗ್ರಾಮೀಣ ಭಾಗಗಳಲ್ಲಿ ಸುಡುಗಾಡುಸಿದ್ಧರ ನೆಲೆಗಳು ನಗರಗಳಿಗಿಂತಲೂ ಕಡಿಮೆ ಪ್ರಮಾಣದಲ್ಲಿದ್ದು ಸಾಮಾನ್ಯವಾಗಿ ಬಯಲು ಜಾಗಗಳಲ್ಲಿ ಗುಡಾರಗಳನ್ನು ಹಾಕಿಕೊಂಡು ವಾಸವಾಗಿರುವುದನ್ನು ಗಮನಿಸಬಹುದಾಗಿದೆ. ಭಿಕ್ಷಾಟನೆಯನ್ನೇ ವೃತ್ತಿಯಾಗಿಸಿಕೊಂಡಿರುವ ಇವರಿಗೆ ಹಳ್ಳಿಗಳಿಗಿಂತ ಪಟ್ಟಣಗಳಲ್ಲಿಯೇ ಹೆಚ್ಚು ಭಿಕ್ಷೆ ಸಿಗುವ ಸಾಧ್ಯತೆಗಳಿರುತ್ತವೆ. ಹಾಗೇ ಯಾವುದೇ ಅಭ್ಯಂತರವಿಲ್ಲದೆ ಸುಲಭವಾಗಿ ಕೊಳಚೆ ಪ್ರದೇಶಗಳಲ್ಲಿ, ಬಯಲು ಜಾಗಗಳಲ್ಲಿ ನೆಲೆಸುವ ಅವಕಾಶಗಳು ಹಳ್ಳಿಗಿಂತ ಪಟ್ಟಣದಲ್ಲಿಯೇ ಹೆಚ್ಚಾಗಿರುವುದರಿಂದ ಇವರು ಪಟ್ಟಣಗಳನ್ನು ಹೆಚ್ಚಾಗಿ ಆಯ್ಕೆ ಮಾಡಿಕೊಂಡಿರಬಹುದು ಎನಿಸುತ್ತದೆ. ಗ್ರಾಮೀಣ ಭಾಗದಲ್ಲಿ ಶೇ. ೪೦.೭೯ ರಷ್ಟು ಕುಟುಂಬಗಳು ವಾಸಿಸಿದರೆ ನಗರ ಪ್ರದೇಶದಲ್ಲಿ ಶೇ. ೫೯.೨೧ ರಷ್ಟು ಕುಟುಂಬಗಳು ವಾಸಿಸುತ್ತಿವೆ (ಕೋಷ್ಟಕ:೨.೪).


ಕರ್ನಾಟಕ
ಸುಡುಗಾಡು ಸಿದ್ಧ ಬುಡಕಟ್ಟು ನೆಲೆಗಳು
ಬೀದರ
ಗುಲಬರ್ಗಾ
ಬಿಜಾಪುರ
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಕೋಲಾರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಚಿಕ್ಕಬಳ್ಳಾಪುರ
ಹಾಸನ
ದಕ್ಷಿಣ ಕನ್ನಡ
ರಾಮನಗರ
ಮಂಡ್ಯ
ಕೊಡಗು
ಮೈಸೂರು
ಚಾಮರಾಜನಗರ
ಕುಟುಂಬಗಳು
೫೦ರ ಒಳಗೆ
೫೧ - ೧೦೦
೧೦೧ - ೨೦೦
೨೦೧ - ೩೦೦
೩೦೧ - ೪೦೦
೪೦೧ - ೫೦೦
೫೦೧ ರ ಮೇಲ್ಪಟ್ಟು

**ಕೋಷ್ಟಕ: ೨.೨**

**ಸಮೀಕ್ಷೆಗೊಳಪಟ್ಟ ಸುಡುಗಾಡು ಸಿದ್ಧರ ಗ್ರಾಮೀಣ, ನಗರ ಜನಸಂಖ್ಯೆ (೨೦೦೭)**

| ವಿವರ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಗ್ರಾಮೀಣ | ೭೪೯ | ೧೯೫೩ | ೧೭೬೯ | ೩.೭೨೨ |
| ನಗರ | ೧೧೮೩ | ೨೮೦೮ | ೨೫೯೩ | ೫೪೦೧ |

**ವೃತ್ತಚಿತ್ರ: ೨.೧ ಗ್ರಾಮೀಣ, ನಗರ ಜನಸಂಖ್ಯೆ**




**ವಯೋ ಗುಂಪು**

ಯಾವುದೇ ಸಮುದಾಯದ ಶೈಕ್ಷಣಿಕ ಮತ್ತು ಆರ್ಥಿಕ ಅಂಶಗಳನ್ನು ಅರಿಯಲು ಆ ಸಮುದಾಯದ ಜನರ ವಯೋ ಗುಂಪುಗಳನ್ನು ತಿಳಿಯುವುದು ಅಗತ್ಯವಾಗಿರುತ್ತದೆ. ಸುಡುಗಾಡುಸಿದ್ಧರ ಈ ಅಂಶಗಳನ್ನು ಅರಿಯಲು ೪ ವರ್ಷ ಒಳಗಿನವರ ಅಂಕಿಅಂಶಗಳನ್ನು ಕಲೆಹಾಕಲಾಗಿದೆ. ಈ ವಯೋ ಗುಂಪಿನವರನ್ನು ಹೊರಗಿಟ್ಟು ಸಾಕ್ಷರತೆಯ ಪ್ರಮಾಣವನ್ನು ಪಡೆಯಲಾಗಿದೆ. ಇವರ ಒಟ್ಟು ಜನಸಂಖ್ಯೆಯಲ್ಲಿ ಈ ವಯೋ ಗುಂಪಿನವರ ಪ್ರಮಾಣ ೧೨.೫೦ ರಷ್ಟಿದೆ. ೫ ರಿಂದ ೧೭ ವಯೋ ಗುಂಪನ್ನು ಸಾಕ್ಷರತೆಗೆ ಒಳಪಡುವ ಅಧ್ಯಯನಶೀಲ ಆದರೆ ಉದ್ಯೋಗಕ್ಕೆ ಅರ್ಹವಲ್ಲದ ಗುಂಪು ಎಂದು ಪರಿಗಣಿಸಲಾಗಿದೆ. ಈ ಗುಂಪಿನಲ್ಲಿಯ ಇವರ ಪ್ರಮಾಣ ೩೨.೪೭ರಷ್ಟಿರುವುದು. ೧೮ ರಿಂದ ೪೦ ವಯೋ ಗುಂಪನ್ನು ಕಾಯಕರ್ಹ, ಸಂತಾನರ್ಹ ಹಾಗೂ ಚಲನಶೀಲ ಗುಂಪೆಂದು ಗ್ರಹಿಸಲಾಗುವುದು. ಈ ಗುಂಪಿನಲ್ಲಿಯ ಇವರ ಪ್ರಮಾಣ ೪೦.೩೪ ರಷ್ಟಿರುವುದು. ೪೧ ರಿಂದ ೬೦ ವಯೋ ಗುಂಪನ್ನು ಮಾರ್ಗದರ್ಶಿ ಮತ್ತು ಅನುಭವಿ ಗುಂಪೆಂದು ಭಾವಿಸಲಾಗುವುದು. ಈ ಗುಂಪಿನಲ್ಲಿಯ ಇವರ ಪ್ರಮಾಣ ೧೧.೦೨ ರಷ್ಟಿರುವುದು. ೬೧ರ ಮೇಲ್ಪಟ್ಟ ವಯೋ ಗುಂಪು ಅವಲಂಬಿತ, ಅನುಭವಿ, ಅಸಹಾಯಕ, ಕಾಯಕರ್ಹವಲ್ಲದ ಗುಂಪೆಂದು ಪರಿಗಣಿಸಲಾಗುವುದು. ಈ ಗುಂಪಿನಲ್ಲಿಯ ಇವರ ಪ್ರಮಾಣ ೩.೬೫ ರಷ್ಟಿರುವುದು(ಕೋಷ್ಟಕ:೨.೫). ಸುಡುಗಾಡು ಸಿದ್ಧರಲ್ಲಿ ಕಾಯಕರ್ಹ ವಯೋ ಗುಂಪಿನವರು ಗಣನೀಯ ಪ್ರಮಾಣದಲ್ಲಿದ್ದರೂ ಆಧುನಿಕ ಸಾಕ್ಷರತೆಯ ಕೊರತೆ

ಯಿಂದಾಗಿ ಇವರ ಆರ್ಥಿಕ ಸ್ಥಿತಿ ಅದೇ ಪ್ರಮಾಣದಲ್ಲಿ ಸುಧಾರಿಸುವುದು ಕಷ್ಟಸಾಧ್ಯ. ಇವರಲ್ಲಿ ೦ -೪ ರೊಳಗಿನ ವಯಸ್ಸಿನ ಮಕ್ಕಳು ಒಟ್ಟು ೧೧೪೧ ಇದ್ದು ಇದರಲ್ಲಿ ಬಾಲಕರು ೫೯೧ ಬಾಲಕಿಯರು ೫೫೦ರಷ್ಟಿದ್ದಾರೆ. ಅಂದರೆ ಬಾಲಕರ ಜನನ ಪ್ರಮಾಣಕ್ಕಿಂತ ಬಾಲಕಿಯರ ಜನನ ಪ್ರಮಾಣ ಕಡಿಮೆಯಾಗಿ ಇತ್ತೀಚಿನ ವರ್ಷಗಳಲ್ಲಿ ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಇನ್ನುಳಿದ ವಯೋಮಾನಗಳ ಅನುಪಾತವನ್ನು ನೋಡಿದರೆ ಪುರುಷರ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣ ಸ್ವಲ್ಪ ಕಡಿಮೆ ಇರುವುದು ಕಂಡುಬರುತ್ತದೆ.

**ಕೋಷ್ಟಕ: ೨.೩**

**ಸಮೀಕ್ಷೆಗೊಳಪಟ್ಟ ವಯೋಗುಂಪುವಾರು ಲಿಂಗವಾರು ಜನಸಂಖ್ಯೆ (೨೦೦೭)**

| ಸಂ. | ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ೦೦-೦೪ | ೫೯೧ | ೫೫೦ | ೧೧೪೧ |
| ೨ | ೦೫-೧೭ | ೧೬೫೬ | ೧೩೦೬ | ೨೯೬೨ |
| ೩ | ೧೮-೪೦ | ೧೮೦೬ | ೧೮೭೫ | ೩೬೮೧ |
| ೪ | ೪೧-೬೦ | ೫೪೩ | ೪೬೩ | ೧೦೦೬ |
| ೫ | ೬೧ರ ಮೇಲ್ಪಟ್ಟು | ೧೬೫ | ೧೬೮ | ೩೩೩ |
| | ಒಟ್ಟು | ೪೭೬೧ | ೪೩೬೨ | ೯೧೨೩ |

### ಲಿಂಗಾನುಪಾತ

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗಾನುಪಾತವಾಗಿರುತ್ತದೆ. ೨೦೦೧ರ ಜನಗಣತಿಯ ಪ್ರಕಾರ ಕ್ರಮವಾಗಿ ಲಿಂಗಾನುಪಾತವು ಭಾರತದಲ್ಲಿ ೯೩೩, ಕರ್ನಾಟಕದಲ್ಲಿ ೯೬೫ ಇದ್ದರೆ ಕರ್ನಾಟಕದ ಸುಡುಗಾಡು ಸಿದ್ಧ ಸಮುದಾಯದ ಸರಾಸರಿ ಲಿಂಗಾನುಪಾತ ೯೧೬ ಇರುವುದು.

### ಕುಟುಂಬ ಗಾತ್ರ

ಕರ್ನಾಟಕ ಸುಡುಗಾಡು ಸಿದ್ಧರ ಸರಾಸರಿ ಕುಟುಂಬದ ಗಾತ್ರ ೪.೭೨ ಇಂದು ವಿಭಕ್ತ ಕುಟುಂಬಗಳು ಹೆಚ್ಚುತ್ತಿವೆ. ಹಿಂದೆ ಅವಿಭಕ್ತ ಕುಟುಂಬಗಳು ಹೆಚ್ಚಿರುತ್ತಿದ್ದವು. ಬೇಟೆಗಾಗಿ, ಮೀನುಗಾರಿಕೆ, ಕಾಯಕಗಳಿಗೆ ಇದು ಅನಿವಾರ್ಯವಾಗಿತ್ತು. ಈ ಕಾಯಕಗಳು ನಶಿಸುತ್ತಿದ್ದಂತೆ ವಿಭಕ್ತ ಕುಟುಂಬಗಳು ಹೆಚ್ಚುತ್ತಿವೆ.

೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

## ಮನೆ, ಕೊಟ್ಟಿಗೆ, ಗಲ್ಲಿ, ಎಲ್ಲೆಕಟ್ಟು, ಅಥವಾ ಮೇರೆ

ಸುಡುಗಾಡುಸಿದ್ದರು ಸಾಮಾನ್ಯವಾಗಿ ಒಂದೇ ಗುಡಿಸಲಿನಲ್ಲಿ ತಮ್ಮ ಇಡೀ ಸಂಸಾರವನ್ನು ಕಳೆಯುತ್ತಾರೆ. ತಮ್ಮ ವಾಸಕ್ಕಾಗಿ ತಾತ್ಕಾಲಿಕವಾಗಿ ಗುಡಿಸಲುಗಳನ್ನು, ಡೇರೆಗಳನ್ನು ಹಾಕಿಕೊಳ್ಳುತ್ತಾರೆ. ಇವು ಕವದಿ ಅಥವಾ ಬಟ್ಟೆಯಿಂದ ತಯಾರಿಸಲಾಗುತ್ತದೆ. ವಲಸೆ ಸಮಯದಲ್ಲಿ ಭಾರ ಕಡಿಮೆ ಇರಲು ಬಟ್ಟೆಗುಡಾರಗಳನ್ನು ತಮ್ಮ ಜೊತೆಯಲ್ಲಿಟ್ಟುಕೊಂಡು ಅಲೆದಾಡುತ್ತಾರೆ. ಹೆಚ್ಚು ಭಾರವಿಲ್ಲದ ಹಗುರವಾದ ಸಾಮಾನುಗಳನ್ನು ಬಳಸಿಕೊಂಡು ವಾಸದ ಮನೆ ಗುಡಿಸಲುಗಳನ್ನು ಕುಟುಂಬದ ಗಾತ್ರಕ್ಕೆ ತಕ್ಕಂತೆ ನಿರ್ಮಿಸಿಕೊಂಡಿರುತ್ತಾರೆ. ಇನ್ನು ಕೆಲವರು ಸ್ವಲ್ಪ ಬದಲಾವಣೆಗಾಗಿ ಚಾಪೆ, ಹುಲ್ಲು, ಆಪು ಅಥವಾ ಮೆದೆಯನ್ನು ಬಳಸಿ ಗುಡಿಸಲುಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಾರೆ. ತಮ್ಮ ಇಡೀ ಸಂಸಾರದ ಜೊತೆಗೆ ಕುರಿ, ಕೋಳಿ, ನಾಯಿಗಳನ್ನು ಸಾಕಿಕೊಂಡಿರುತ್ತಾರೆ. ಗುಡಿಸಲುಗಳ ಮುಂದೆ ಗೂಟಗಳನ್ನು ನೆಟ್ಟು ಅವುಗಳನ್ನು ಕಟ್ಟುತ್ತಾರೆ. ಗುಡಿಸಲ ಹಿಂಭಾಗದಲ್ಲಿ ತಮ್ಮ ಸಾಮಾನುಗಳನ್ನು ಇಡಲು ಬಿದರಿನಿಂದ ತಯಾರಿಸದ ಸಣ್ಣ ಮಂಚಗಳನ್ನು ಉಪಯೋಗಿಸುತ್ತಾರೆ. ಇದು ಪ್ರವಾಸ ಮಾಡುವಾಗಲು ತೊಂದರೆಯಾಗದಂತೆ ಸಣ್ಣ ಮಂಚಗಳನ್ನು ಗುಡಿಸಲುಗಳಲ್ಲಿ ಇವರು ಹಾಸಲು ಮತ್ತು ಹೊದೆಯಲು ಈಚಲು ಚಾಪೆ ಕೌದಿಗಳನ್ನು ಬಳಸುತ್ತಾರೆ. ಕೆಲವರು ಕಂಬಳಿಗಳನ್ನು ಬಳಸುವುದುಂಟು. ಮಳೆಗಾಲವಿರಲಿ, ಚಳಿಗಾಲವಿರಲಿ, ಇಲ್ಲವೆ ಬೇಸಿಗೆ ಕಾಲವಿರಲಿ ಅದೇ ಗುಡಾರ ಗುಡಿಸಲುಗಳಲ್ಲಿ ಕಾಲಕಳೆಯುತ್ತಾರೆ. ಯಾವ ಬದಲಾವಣೆ ಮಾಡಿಕೊಳ್ಳುವುದಿಲ್ಲ ಮತ್ತು ಗುಡಿಸಲುಗಳನ್ನು ಕೊಡೆಯಾಕಾರದಲ್ಲಿ ನಿರ್ಮಿಸಿ ಮಳೆಗಾಲದಲ್ಲಿ ನೀರು ಹರಿದು ಹೋಗಲು ಮತ್ತು ಮಳೆ ನೀರು ಗುಡಾರ, ಗುಡಿಸಲಲ್ಲಿ ಒಳಗೆ ಬಾರದಂತೆ ಸುತ್ತಲು ಮಣ್ಣಿನಿಂದ ಒಡ್ಡು ಮಾಡಿಕೊಂಡಿರುತ್ತಾರೆ. ಅಡಿಗೆ ಮಾಡಲು ಒಲೆಗಳನ್ನು ಗುಡಾರದ ಮುಂದಿನ ಬಯಲಿನಲ್ಲಿ ಮಾಡುತ್ತಾರೆ. ಹೆಚ್ಚಾಗಿ ಈ ತರಹದ ಗುಡಾರಗಳನ್ನು ಭೀಕ್ಷಾಟನೆ ಮಾಡುವರೂ ಹಾಗೂ ಊರಿಂದೂರಿಗೆ ವಲಸೆ ಹೋಗುವವರಲ್ಲಿ ಹೆಚ್ಚಾಗಿ ಕಾಣಬಹುದು.

ಇತ್ತೀಚೀಗೆ ಸುಡುಗಾಡು ಸಿದ್ಧರು ಅಲೆಮಾರಿ ಬದುಕನ್ನು ನಿಲ್ಲಿಸಿ ತಮಗೆ ಅನುಕೂಲವಾದ ಊರುಗಳನ್ನು ಗುರುತಿಸಿಕೊಂಡು ತಮ್ಮ ತಮ್ಮ ಸಂಬಂಧಿಕರೊಂದಿಗೆ ಒಂದೆಡೆ ನೆಲಸ ಹತ್ತಿದ್ದಾರೆ. ತಮ್ಮ ಶಕ್ತಿಯಾನುಸಾರ ಹೊಲ, ಮನೆ, ಆಸ್ತಿಗಳನ್ನು ಮಾಡಿಕೊಂಡು ಸ್ಥಿರವಾಗಿ ನಿಂತಿರುವುದನ್ನು ಕಾಣುತ್ತೇವೆ. ಇಂಥವರು ಕಲ್ಲು, ಮಣ್ಣಿನಿಂದ ಕೂಡಿದ ಮನೆಯನ್ನು ನಿರ್ಮಿಸಿ ಅದರಲ್ಲಿ ದನ ಕರುಗಳನ್ನು ಹಾಗೂ ಕುರಿ, ಕೋಳಿ ಮೊದಲಾದ ಸಾಕುಪ್ರಾಣಿಗಳನ್ನು ಸಾಕಲು ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಕಲ್ಲು ಮಣ್ಣಿನ ಮನೆಗಳಿಗೆ ಕಟ್ಟಿಗೆಯಿಂದ ತಯಾರಿಸಿದ ಕಿಟಕಿ ಬಾಗಿಲುಗಳನ್ನು ಇರಿಸುತ್ತಾರೆ. ಇದು ಅಂಕಣಗಳಿಂದ ಕೂಡಿದ ಮನೆಯಾಗಿರುತ್ತದೆ. ಇಂತಹ ಮನೆಗಳಲ್ಲಿ ಸಣ್ಣಪುಟ್ಟ ಸಾಮಾನುಗಳನ್ನು ಇಡಲು ಗುಣೇವುಗಳನ್ನು ಅಲ್ಲಲ್ಲಿ ಬಿಟ್ಟಿರುತ್ತಾರೆ. ಮನೆಯಲ್ಲಿ ಅಡಿಗೆ ಮಾಡಿಕೊಳ್ಳಲು ಪ್ರತ್ಯೇಕ ಒಲೆಗಳನ್ನು ಮಾಡಿರುತ್ತಾರೆ. ಅಡಿಗೆ ಮಾಡುವಾಗ ಹೊಗೆ ಹೋಗಲು ಹೊಗೆ ಕಿಂಡಿಗಳನ್ನು ಮಾಡಿರುತ್ತಾರೆ. ಸುಡುಗಾಡುಸಿದ್ಧರು ತಮ್ಮ ಸಮುದಾಯದವರೊಂದಿಗೆ ಊರಿನ ಹೊರ ಭಾಗದಲ್ಲಿ ಮನೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಇಂಥವುಗಳಿಗೆ ಊರಿನವರು ಸಿದ್ಧರ ಪಾಳೆ ಅಥವಾ ಸಿದ್ಧರ ಗಲ್ಲಿ, ಸಿದ್ಧರ ವಟಾರ, ಸಿದ್ಧರ ಓಣಿ ಎಂದು ಕರೆಯುತ್ತಾರೆ. ಸಾಧ್ಯವಾದಲೆಲ್ಲ ಸಮುದಾಯದವರು ಕೂಡಿಕೊಂಡು ಸಮುದಾಯದ ವತಿಯಿಂದ ಭೂಮಿಯನ್ನು ಖರೀದಿಸಿ ಎಲ್ಲರೂ ಒಂದೇ ಕಡೆ ನೆಲೆಸಲು ಸೂಕ್ತ ಸ್ಥಳಗಳನ್ನು ಗುರುತಿಸಿ ಎಲ್ಲಾ ಕುಟುಂಬಗಳಿಗೆ ಸರಿ ಸಮನಾಗಿ ಸ್ಥಳವನ್ನು ಕೊಟ್ಟು ಮನೆ ಕಟ್ಟಿಕೊಳ್ಳಲು ಸೂಚಿಸುತ್ತಾರೆ. ಇವರು ತಮ್ಮ ಸಮುದಾಯದ ಕುಟುಂಬಗಳೆಲ್ಲಾ ಒಂದಡೆ ಇರಲು ಬಯಸುತ್ತಾರೆ. ಇತ್ತೀಚೆಗೆ ಸರ್ಕಾರದವರು ಮನೆಯಿಲ್ಲದ ಕುಟುಂಬಗಳಿಗೆ ಆಶ್ರಯ ಮನೆಗಳನ್ನು ನಿರ್ಮಿಸಿ ಕೊಡುತ್ತಿದ್ದಾರೆ. ಕೆಲವು ಕುಟುಂಬಗಳಿಗೆ ಅನಿವಾರ್ಯವಾಗಿ ಬೇರೆ ಜಾತಿಯ ಕುಟುಂಬಗಳೊಂದಿಗೆ ಆಶ್ರಯ ಮನೆಗಳನ್ನು ಪಡೆದು ಅವರೊಂದಿಗೆ ಜೀವನ ಸಾಗಿಸುವರು. ಇಂತಹ ಮನೆಗಳಿಗೆ ದಿಕ್ಕು ಮತ್ತು ಆಯಾ ಅಂತಾ ಯಾವ ನಿಯಮಗಳು ಅನ್ವಯಿಸುವುದಿಲ್ಲ.

## ಕ್ರಿಯಾವಿಧಿಯ ಸ್ಥಳಾವರಣ

ಕ್ರಿಯಾವಿಧಿಯ ಸ್ಥಳಾವರಣಗಳು ಸುಡುಗಾಡು ಸಿದ್ಧರೊಂದಿಗೆ ಸಂಚರಿಸುತ್ತಿರುತ್ತದೆ. ನಿತ್ಯ ಕ್ರಿಯೆಗಳಿಗೆ ಸಂಬಂಧಿಸಿದ ಸ್ಥಳಾವರಣ, ಹುಟ್ಟು ಸಾವುಗಳಿಗೆ ಸಂಬಂಧಿಸಿದ ಕ್ರಿಯಾವಿಧಿಯ ಸ್ಥಳಾವರಣ, ನಿತ್ಯ ಭಿಕ್ಷಾಟನೆ ನಡೆಸುವಾಗ ಕೈಚಳಕದ ಆಟವನ್ನು ನಡೆಸುವ ಸ್ಥಳಾವರಣ ಹಾಗೂ ದೈವಾಚರಣೆಗೆ ಸಂಬಂಧಿಸಿದ ಸ್ಥಳಾವರಣ ಹೀಗೆ ನಾಲ್ಕು ವಿಧದ ಕ್ರಿಯಾವಿಧಿಯ ಸ್ಥಳಾವರಣಗಳನ್ನು ಸುಡುಗಾಡು ಸಿದ್ಧರಲ್ಲಿ ಕಾಣಬಹುದಾಗಿದೆ. ತಾವು ಎಲ್ಲೆಲ್ಲಿ ನೆಲೆಸುತ್ತಾರೋ ಅಲ್ಲಲ್ಲಿಯೇ ಸ್ಥಳಾವರಣ ಏರ್ಪಡುತ್ತದೆ. ಸೂತಕಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಸಾವಿಗೆ ಸಂಬಂಧಿಸಿದಂತಹ ಕ್ರಿಯಾವಿಧಿಯು ಸುಡುಗಾಡು (ಸ್ಮಶಾನ) ಹಾಗೂ ಗುಡಾರದ ಹೊರಭಾಗಗಳಲ್ಲಿ ನಡೆಯುತ್ತವೆ. ಹಳ್ಳಿಯ ರೈತರ ಮನೆಗಳು, ಜನ ಹೆಚ್ಚಾಗಿ ಸೇರುವ ಸ್ಥಳಗಳು ಕೈಚಳಕದ ಆಟಗಳಿಗೆ ಸ್ಥಳಾವರಣವಾಗಿರುತ್ತವೆ. ಇನ್ನು ಇವರ

ಜೋಳಿಗೆಗಳೇ ದೈವಕ್ಕೆ ಸಂಬಂಧಿಸಿದ ಸ್ಥಳಾವರಣವಾಗಿರುತ್ತದೆ. ಗುಡಾರದೊಳಗೆ ಪ್ರತ್ಯೇಕ ಸ್ಥಳವೊಂದರಲ್ಲಿ, ಜೋಳಿಗೆಗಳನ್ನು ನೇತು ಹಾಕುತ್ತಿದ್ದೂ, ಆ ಜೋಳಿಗೆ ಹಾಕುವ ಸ್ಥಳವೇ ದೈವಾಚರಣೆಯ ಸ್ಥಳಾವರಣವಾಗಿರುತ್ತದೆ.

## ಪ್ರಸಾರ ನೆಲೆಗಳು

ಪ್ರತಿಯೊಂದು ಸಮುದಾಯದ ಜಾತಿ ಉಪಜಾತಿಗಳು ತಮ್ಮ ಬೆಡಗು ಪಂಗಡಗಳ ಆಧಾರದ ಮೇಲಿಂದ ತಮ್ಮ ರಕ್ತ ಸಂಬಂಧವನ್ನು ಬೆಳೆಸುತ್ತಾ ಬಂದಿದ್ದಾರೆ. ಒಂದೇ ಬೆಡಗಿನವರು ಸಹೋದರರಾಗುತ್ತಾರೆ. ಆದರೆ ವಿಜಾತಿ ಬೆಡಗುಗಳ ಜೊತೆಗೆ ರಕ್ತಸಂಬಂಧವನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ಬುಡಕಟ್ಟುಗಳ ಸಂಸ್ಕೃತಿ, ಆಚಾರ-ವಿಚಾರ ವಿಧಿ-ನಿಷೇಧಗಳನ್ನು ತಿಳಿದುಕೊಳ್ಳುವಾಗ ಆ ಜಾತಿಯ ಬೆಡಗುಗಳು ಹೆಚ್ಚು ಮುಖ್ಯ ಪಾತ್ರವನ್ನು ವಹಿಸುತ್ತವೆ. ಪ್ರತಿಯೊಂದು ಮನೆತನದ ಇತಿಹಾಸವನ್ನು ಬೆಡಗುಗಳು ಹೇಳುತ್ತವೆ. ಅಲೆಮಾರಿ ಸಮುದಾಯದವರ ಪ್ರತಿಯೊಂದು ಮನೆತನವು ಬೆಡಗುಗಳ ಆಧಾರದ ಮೇಲಿಂದಲೇ ಮದುವೆ ಮಾಡಿಕೊಳ್ಳುತ್ತಾರೆ.

## ಬ್ರಹ್ಮಾಂಡದ ಪರಿಕಲ್ಪನೆ

ಭೂಮಿಯ ಮೇಲೆ ಮನುಷ್ಯ ತಾನು ಅಸ್ತಿತ್ವಕ್ಕೆ ಬಂದ ಮೇಲೆ ಪ್ರಕೃತಿಯ ಅದ್ಭುತ ಶಕ್ತಿಗಳನ್ನು ಕಂಡು ಅವುಗಳಿಗೆ ಹೆದರಿ ಅವುಗಳಿಗೆ ಕಾರಣವೇನು ಅವುಗಳ ಮೂಲಗಳನ್ನು ಕಂಡುಹಿಡಿಯಲು ಅದ್ಭುತ ಶಕ್ತಿಗಳನ್ನು ತನ್ನ ಬಳಕೆಗೆ ಬಳಿಸಿಕೊಳ್ಳಲು ಮುಂದಾಗುತ್ತಾನೆ. ಕೇವಲ ಆರಾಧನೆಯಿಂದ ಪ್ರಕೃತಿಯನ್ನು ವಶಪಡಿಸಿಕೊಳ್ಳುವ ವಿಧಾನ ಒಂದು ಬಗೆಯಾದರೆ ಇನ್ನೊಂದಡೆ ಪ್ರಯೋಗಗಳ ಮೂಲಕ ಪ್ರಕೃತಿಯ ರಹಸ್ಯವನ್ನು ಪತ್ತೆಹಚ್ಚುವ ಪ್ರಯತ್ನವಾಗಿದೆ. ಮನುಷ್ಯನು ತನ್ನ ಸೃಷ್ಟಿಗೆ ಕಾರಣವಾದ ಯಾವದೊ ಒಂದು ಶಕ್ತಿ ಇದೆ. ಎಂದು ಕಲ್ಪಿಸಿಕೊಂಡನು ಹಾಗೂ ಆ ಶಕ್ತಿಯನ್ನು ಪ್ರಕೃತಿಯಲ್ಲೇ ಕಂಡುಕೊಂಡನು ಇಂದಿಗೂ ಜನರಲ್ಲಿ ಭೂಮಿ, ಸೂರ್ಯ, ನದಿ, ಮರ, ಬೆಟ್ಟ, ಗುಡ್ಡ, ಇತ್ಯಾದಿಗಳನ್ನು ಪೂಜಿಸುವುದನ್ನು ಕಾಣುತ್ತೇವೆ.

**ಸೂರ್ಯ ಸಂತತಿ :** ಕಮಲಪುತ್ರ ಬ್ರಹ್ಮ. ಬ್ರಹ್ಮಪುತ್ರ ಮರೀಚ, ಮಗ ಕಶ್ಯಪ, ಕಶ್ಯಪನ ಮಗ ಜಗದಾತ. ಜಗದಾತನ ಮಗ ಮನು; ಮನುವಿನ ಮಗ ಇಕ್ಷ್ವಾಕು; ಇಕ್ಷ್ವಾಕವಿನ ಮಗ ಕುಕ್ಷಿ; ಕುಕ್ಷಿಯ ಮಗ ಅಕ್ಷತ; ಅಕ್ಷತನ ಮಗ ಬಾನು; ಬಾನುವಿನ ಮಗ ನೆಲವೆರಿಣ್ಣ; ನೆಲವೆರಿಣ್ಣನ ಮಗ ದುಮ್ಮಾನ; ದುಮ್ಮಾನನ ಮಗ ಯಮುವಾಸು; ಯಮುವಾಸುವಿನ ಮಗ ಮಹದಾತ; ಮಹದಾತನ ಮಗ ಮಚ್ಚೆಂದಿ; ಮಚ್ಛಂಧಿ ಮಗ ದಾಶನಿರ; ದಾಶನಿರನ ಮಗ ಕಾಕಸ್ತು; ಕಾಕಸ್ತುವಿನ ಮಗ ಕಲುಪುಷ್ಪಾದ; ಕಲುಪುಷ್ಪಾದನ ಮಗ ಹಂಸ್ತತ್ತು; ಹಂಸ್ತಸ್ತುವಿನ ಮಗ ಅಮರೀಶರಾಜ; ಅಮರೀಶರಾಜನ ಮಗ ಸಗರ; ಸಗರನ ಮಗ ಅಸಮಂಜೀಸ; ಅಸಮಂಜೀಸನ ಮಗ ಸುಮಂತ; ಸುಮಂತನ ಮಗ ದೀಲಿಪ; ಧೀಲಿಪನ ಮಗ ಭಗೀರಥ; ಭಗೀರಥನ ಮಗ ಬಾಸುರ; ಬಾಸುರನ ಮಗ ಆಧಿರಾಜ; ಆಧಿರಾಜನ

ಮಗ ರಘುರಾಜ; ರಘುರಾಜನ ಮಗ ದಶರಥ; ದಶರಥನ ಮಗ ರಾಮ; ರಾಮನ ಮಗ ಲವ; ಲವನ ಮಗ ಬಿಂಧು; ಬಿಂಧುವಿನ ಮಗ ಆಗಮನ; ಆಗಮನ ಮಗ ಆರ್ಯಮ; ಆರ್ಯಮನ ಮಗ ಸೀಳಗೋಪಾಲ; ಸೀಳಗೋಪಾಲನ ಮಗ ನಂದಗೋಪಾಲ; ನಂದಗೋಪಾಲನ ಮಗ ವಾಸುದೇವ; ವಾಸುದೇವನ ಮಗನೇ ಶ್ರೀಕೃಷ್ಣ.

**ಯುಗಗಳು :** ೧. ಆದಿ ೨. ಅನಾಧಿ ೩. ಕಳಂತರ ೪. ಅದ್ಭುತ ೫. ಕಮಂಜ ೬. ಕಾಲಿಜ ೭. ಕಂಡಜ ೮. ಬಿನ್ನಜ ೯. ಬಿನ್ನಾಯುಕ್ತ ೧೦. ಮಾನಗಣ್ಣ ೧೧. ಮನಗಣ್ಣ ೧೨. ವಿಶ್ವಾಸು ೧೩. ತ್ರೇತಾಯುಗ ೧೪. ಕೃತಿಯುಗ, ೧೫. ದ್ವಾಪರ ಕಲಿಯುಗ.

ಯುಗಧರ್ಮ ಆದಿಯೆಂಬ ಯುಗವನ್ನು ಅಖಂಡೇಶ್ವರ ನಿರ್ಮಾಣ ಮಾಡಿದ ಅನಾದಿ ಯುಗದಲ್ಲಿ ಸ್ವಾಮಿಕಾಯ ಉದ್ಭವಿಸುತು. ಅಖಂಡೇಶ್ವರನೆಂಬುವನು ಸಾಕ್ಷಾತ್ ಪರಮಾತ್ಮನ ಪಾದದಲ್ಲಿ ಹುಟ್ಟಿದನು ಅದ್ವೈತ ಯುಗದಲ್ಲಿ ಪಾರ್ವತಿ ದೇವಿ ಹುಟ್ಟಿದಳು ತಮಂಗಿನಿ ಎಂಬ ಯುಗದಲ್ಲಿ ನಾರಾಯಣ ಹುಟ್ಟಿದನು. ನಾರಾಯಣನ ನಾಭಿಯಲ್ಲಿ ಕಮಲ ಹುಟ್ಟಿತು. ಆ ಬ್ರಾಹ್ಮನಿಗೆ ಅಜರಂಬಸ್ಯ ಆಯಿತು. ತಂಡಿ ಜನ್ಮಯುಗದಲ್ಲಿ ಬ್ರಹ್ಮಾಂಡ ಹುಟ್ಟಿತು ಬಿನ್ನಜವೆಂಬ ಯುಗದಲ್ಲಿ ಆತಂಕದಲ್ಲಿ ಬಿನ್ನಾಯವಾಯಿತು. ಬಿನ್ನವಾಸುತಲೆ ಮೇಲು ಪರ್ಯಂಗಳು ಹುಟ್ಟಿದವು ಆಯುಕ್ತಿ ಎಂಬ ಅಷ್ಟಕುಲ ಪರ್ವತಗಳು ಹುಟ್ಟಿದವು ಅಮಾದಿತ್ಯವೆಂಬ ಯುಗದಲ್ಲಿ ಸಪ್ತ ಋಷಿಮಂಡಲಗಳು ಹುಟ್ಟಿದವು. ಮುನಿನೆಂಬ ಯುಗದಲ್ಲಿ ಸಪ್ತ ಏಳುಸಮುದ್ರಗಳು ಹುಟ್ಟಿದವು. ಮಾಸಿನೆಂಬ ಯುಗದಲ್ಲಿ ದೇವಾನು ದೇವತೆಗಳು ಹುಟ್ಟಿದರು. ಈಶ್ವರನೆಂಬ ಯುಗದಲ್ಲಿ ಚಂದ್ರ, ಸೂರ್ಯದಿಗಳು ಹುಟ್ಟಿದರು. ಇಶ್ವಾಸು ಎಂಬ ಯುಗದಲ್ಲಿ ಧನ ರತ್ನ ಹುಟ್ಟಿದವು. ಆಲಂಕೃತವೆಂಬ ಯುಗದಲ್ಲಿ ಉತ್ತಮ ಮಧ್ಯಮ ಕಶ್ಯಪು ಹುಟ್ಟಿದವು. ತ್ರೇತಾಯುಗದಲ್ಲಿ ದೇವದ್ರೈತ್ಯ ಮದುವೆಯಾಯಿತು. ದ್ವಾಪಾರದಲ್ಲಿ ಕೌರವ ಪಾಂಡವರ ಯುದ್ಧವಾಯಿತು. ಕಲಿಯುಗದಲ್ಲಿ ಆಸೆ-ಇರ್ಸೆಗಳಿಗೆ ಯುದ್ಧವಾಯಿತು.

## ವಂಶೋತ್ಪತ್ತಿಯ ವಿಚಾರಕ್ಕೆ ಸಂಬಂಧಿಸಿದ ಐತಿಹ್ಯಗಳು

ಸುಡುಗಾಡುಸಿದ್ಧರು ವಂಶೋತ್ಪತ್ತಿಯ ಬಗೆಗೆ ಹಲವಾರು ಪುರಾಣ, ಕಾವ್ಯ ಹಾಗೂ ಐತಿಹ್ಯಗಳು ಸಾಕಷ್ಟು ಮಾಹಿತಿಯನ್ನು ಕೊಡುತ್ತವೆ. ಸುಡುಗಾಡುಸಿದ್ಧರ ವಂಶೋತ್ಪತ್ತಿಯ ಬಗ್ಗೆ ಈ ರೀತಿಯಾಗಿ ವಿವರಣೆಗಳಿವೆ.

ಐತಿಹ್ಯ ೧ :ಈಶ್ವರನು ತಪಸ್ಸು ಮಾಡುವಾಗ ಅವನ ಸೇವೆಗಾಗಿ ಪಾರ್ವತಿಯು ನವಕೋಟಿ ಸಿದ್ಧರನ್ನು ಸೃಷ್ಟಿಸಿದಳು. ತಪ್ಪಸ್ಸಿನ ಕೆಲಸ ಮುಗಿದನಂತರ ವಿಭೂತಿ, ಕಾವಿ, ಕಮಂಡಲ ರುದ್ರಾಕ್ಷಿ ಶಿವನ ಗಂಟೆಯನ್ನು ಕೊಟ್ಟು ಭೂಲೋಕಕ್ಕೆ ಕಳಿಸಿದಳೆಂದೂ ಅವರೇ ಸುಡುಗಾಡುಸಿದ್ಧರೆಂದು ಹೇಳುತ್ತಾರೆ.

ಐತಿಹ್ಯ ೨ : ಬಹಳ ಹಿಂದಿನ ಕಾಲದಲ್ಲಿ ಸಿದ್ದಯ್ಯ ಎಂಬುವವನು ಸುಡುಗಾಡು ಕಾವಲು ಕಾಯುತಿದ್ದನಂತೆ. ಸತ್ತ ಹೆಣಗಳನ್ನು ಸುಡಲಿಕ್ಕೆ ಮಣ್ಣು ಮುಚ್ಚಲಿಕ್ಕೆ ಸ್ಥಳಕೊಟ್ಟರೆ ಮೂರು

ಪೈಸೆ ಮತ್ತು ಅಕ್ಕಿ ಗಜಪಟ್ಟಿ ತೆಗೆದುಕೊಳ್ಳುತ್ತಿದ್ದನು. ಒಂದು ವೇಳೆ ಮೂರು ಪೈಸೆ ರೊಕ್ಕ ಗಜಪಟ್ಟಿ ಕೊಡದಿದ್ದರೆ ಅವನು ಶವವನ್ನು ಸಂಸ್ಕಾರ ಮಾಡಲು ಕೊಡುತ್ತಿರಲಿಲ್ಲ. ಅವನು ಸುಡುಗಾಡಿನ ಅಧಿಕಾರಿಯಾಗಿ ಕೆಲಸ ಮಾಡುತ್ತಿದ್ದನು. ಆ ಸಿದ್ದಯ್ಯನಿಗೆ ಜನರು ಸುಡುಗಾಡು ಸಿದ್ದಯ್ಯ ಎಂದು ಕರೆಯುತ್ತಿದ್ದರು. ಮುಂದೆ ಇವನ ಮಕ್ಕಳು ಮೊಮ್ಮಕ್ಕಳು ಸುಡುಗಾಡಿನಲ್ಲಿರುವದರಿಂದ ಇವರನ್ನು ಸುಡುಗಾಡುಸಿದ್ದರೆಂದು ಕರೆಯಲಾಯಿತು.

ಐತಿಹ್ಯ ೩ : ಘೋರಕ್ಷ ಎಂಬ ರಾಕ್ಷಸ ದೇವಾನು ದೇವತೆಗಳಿಗೆ ತುಂಬಾ ಕಷ್ಟ ಕೊಡುತ್ತಿದ್ದನು. ಇವರು ಯಂತ್ರ ಮಂತ್ರ ತಂತ್ರಗಳಲ್ಲಿ ನಿಪುಣನಾಗಿದ್ದನು. ಸಿದ್ದರನ್ನು ಈತ ತನ್ನ ಮನೆಯ ಕಾವಲಿಗಾಗಿ ಇಟ್ಟುಕೊಂಡಿದ್ದ. ಘೋರಕ್ಷನ ಉಪಟಳ ತಾಳಲಾರದೆ ಅವರು ಪರಶಿವನ ಮೊರೆಹೊಕ್ಕರು ಆತ ರೇವಣಸಿದ್ದನನ್ನು ಕಳುಹಿಸಿದ. ಈಶ್ವರ ಮಾಯಾಜಾಲದಿಂದ ಹಾವು ಚೇಳುಗಳನ್ನು ಸೃಷ್ಟಿಸಿದ. ಘೋರಕ್ಷಕನ ಸಂಹಾರಕ್ಕಾಗಿ ಬರುತ್ತಿದ್ದ ರೇವಣಸಿದ್ದನಿಗೆ ಕಾವಲು ಕಾಯುತ್ತಿದ್ದ ಸಿದ್ದರು ತುಂಬಾ ತೊಂದರೆ ಕೊಟ್ಟರು. ಕೊನೆಗೆ ಸಿಟ್ಟಿನಿಂದ ಉರಿನೇತ್ರ ಬಿಟ್ಟು ಎಲ್ಲರನ್ನು ಬಸ್ಮಮಾಡಿದ. ಕೊನೆಗೆ ಘೋರಕ್ಷ ರಾಕ್ಷಸನನ್ನು ಸಂಹರಿಸಿ ಹಿಂದಿರಿಗಿ ಬರುವಾಗ ಸ್ಮಶಾನದಲ್ಲಿ ಬೂದಿಯಾಗಿ ಬಿದ್ದಿರುವ ಸಿದ್ದರನ್ನು ನೋಡಿ ಕರುಣೆಬಂದು ಬದುಕಿಸಿದನಂತೆ ಇವರು ಸುಡುಗಾಡಿನಲ್ಲಿ ಜನಿಸಿದ್ದರಿಂದ ಸುಡುಗಾಡುಸಿದ್ದರೆಂದು ನಾಮಕರಣವಾಯಿತೆಂದೂ ತಾವು ಶಿವನ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ.

ಐತಿಹ್ಯ ೪ : ದೇವಾನುದೇವತೆಗಳನ್ನೆಲ್ಲಾ ಕಾಡಿದ ಶನಿಯು ಶಿವನನ್ನು ಹಾಗೂ ಅವನ ಮಗ ಗಣೇಶನನ್ನು ಮತ್ತು ಮಾರುತಿಯನ್ನು ಇನ್ನೂ ಕಾಡಿರಲಿಲ್ಲ. ಅದಕ್ಕಾಗಿ ಪರಶಿವನ ಮುಂದೆ ಪ್ರತ್ಯಕ್ಷನಾದ ಶನಿಯು ದೇವಾನುದೇವ. ನಿಮ್ಮ ಕಾಶಿಗೆ ನಾಳೆ ಪ್ರವೇಶ ಮಾಡಬೇಕೆಂದು ಇಚ್ಛೆ ಮಾಡಿದ್ದೇನೆ. ದಯವಿಟ್ಟು ನನ್ನನ್ನು ಮನ್ನಿಸಬೇಕೆಂದು ಕೇಳಿಕೊಳ್ಳುತ್ತಾನೆ. ಅದರಂತೆ ಮಾರನೆ ದಿನ ಶನಿ ಬರುತ್ತಾನೆ ಅಂದು ಪರಶಿವನು ವಿಧಿವತ್ತಾಗಿ ಸುಡುಗಾಡಿನಲ್ಲಿ ವಾಸಿಸುವಂತಹ ಪ್ರಸಂಗ ಬಂದಿರುತ್ತದೆ. ಅದೇ ವೇಳೆಗೆ ಶನಿಯು ಪ್ರವೇಶ ಮಾಡುತ್ತಾನೆಂದು ತಿಳಿದ ಶಿವನು ಆ ಸುಡುಗಾಡಿನಲ್ಲಿ ಆಗ ತಾನೆ ಹೂಳಿದ ಶವವನ್ನು ಹೊರತೆಗೆದು ಆ ಜಾಗದಲ್ಲಿ ಅವಿತುಕೊಳ್ಳುತ್ತಾನೆ.

ಶನಿ ಕಾಡುವ ವೇಳೆ ಮುಗಿದ ನಂತರ ಶಿವನು ಹೊರಬರುತ್ತಾನೆ. ಗಾಳಿ ಮತ್ತು ಬೆಳಕಿಲ್ಲದ ಕಾರಣ ಶಿವನು ತುಂಬಾ ಬೆವತಿರುತ್ತಾನೆ. ಹಣೆಮೇಲೆ ಹನಿ ಹನಿಯಾಗಿದ್ದ ಬೇವರನ್ನು ತೆಗೆದು ಭೂಮಿಗೆ ಎಸೆದಾಗ ಆ ಬೆವರಿನಲ್ಲಿ ನವಕೋಟಿ ಜನರು ಜನ್ಮತಾಳಿದರು. ಸುಡುಗಾಡಿನಲ್ಲಿ ಹುಟ್ಟಿರುವದರಿಂದ 'ಅವರಿಗೆ ಸುಡುಗಾಡುಸಿದ್ದರು' ಎಂದು ನಾಮಕರಣ ಮಾಡಿ ಅವರ ಜೀವನೋಪಾಯಕ್ಕಾಗಿ ಶಿವನು ವಿಭೂತಿ, ಕಾವಿ, ರುದ್ರಾಕ್ಷಿ ಕಮಂಡಲಗಳನ್ನು ದಯಪಾಲಿಸಿ ಅಜ್ಞಾನದಲ್ಲಿರುವ ಲೋಕಕ್ಕೆ ಕಲ್ಯಾಣವನ್ನುಂಟು ಮಾಡುತ್ತಾ ಶುಭ-ಅಶುಭಗಳನ್ನು ಮುಂಚಿತವಾಗಿ ತಿಳಿಯದ ಜನಕ್ಕೆ ತಿಳಿಸುತ್ತಾ ದೇಶ ಸಂಚಾರ ಮಾಡಿರೆಂದು ಉಪದೇಶಿಸಿ ಕಳಿಸಿಕೊಡುತ್ತಾನೆ.

ಐತಿಹ್ಯ ೫ : ಪರಶಿವನಿಂದ ಶಿವದೀಕ್ಷೆ ಪಡೆದ ನವಕೋಟಿ ಸಿದ್ಧರು ದೇಶ ಸಂಚಾರ ಮಾಡುತ್ತಾ ಗೋರಾಜನ ಎಂಬ ದೃಷ್ಟಿ ರಾಜನ ಆಸ್ಥಾನಕ್ಕೆ ಬರುತ್ತಾರೆ. ಕಾವಿ, ರುದ್ರಾಕ್ಷಿ ಕಮಂಡಲ ವಿಭೂತಿ ಧರಿಸಿದವರನ್ನು ಕಂಡರೆ ಆ ರಾಜನಿಗೆ ಆಗುತ್ತಿರಲಿಲ್ಲ. ಒಬ್ಬರು ಇಬ್ಬರಾಗಿದ್ದರೆ ಕೊಲ್ಲಿಸುತ್ತಿದ್ದ. ನವಕೋಟಿ ಸಿದ್ಧರನ್ನು ನೋಡಿದ ಗೋರಾಜನು ಸಿಟ್ಟಿಗೆದ್ದು ಒಂದೆ ಮಂತ್ರದಲ್ಲಿ ಅವರನ್ನೆಲ್ಲಾ ಕಲ್ಲುಗಳಾಗಿಸುತ್ತಾನೆ. ಕುಳಿತಲ್ಲಿಂದಲೇ ಇದನ್ನು ಗಮನಿಸಿದ ಪರಶಿವನು ತಾನೇ ಕಾವಿ ರುದ್ರಾಕ್ಷಿ ಕಮಂಡಲ ಹಿಡಿದು ವಿಭೂತಿ ಧರಿಸಿಕೊಂಡು ಗೋರಾಜನ ಮನೆಯ ಮುಂದೆ ಬಂದು ಭಿಕ್ಷೆಬೇಡುತ್ತಾನೆ. ಈ ಜಂಗಮನನ್ನು ಕಲ್ಲು ಮಾಡುವದಕ್ಕಿಂತ ವಿಷದ ಕಜ್ಜಾಯ ಮಾಡಿಸಿ ತನ್ನ ಹೆಂಡತಿಯಿಂದಲೆ ತಿನ್ನಿಸಿ ಇವನನ್ನು ಸಾಯಿಸಬೇಕೆಂದು ತೀರ್ಮಾನಿಸಿ ವಿಷದ ಕಜ್ಜಾಯ ಮಾಡಲು ಗೋರಾಜನು ಹೆಂಡತಿಗೆ ಅಜ್ಞಾಪಿಸುತ್ತಾನೆ.

ಶಿವಭಕ್ತಿಯ ಹೆಣ್ಣಾದ ಆಕೆ ಗಂಡನ ಮಾತನ್ನು ಮೀರುವಂತೆಯೂ ಇಲ್ಲ ಶಿವಭಕ್ತನಿಗೆ ವಿಷವನ್ನು ಕೊಡಲು ಮನಸಿಲ್ಲ. ಮನದಲ್ಲಿ ಸಾವಿರಬಾರಿ ಸ್ತೋತ್ರಮಾಡಿ ಮನಸ್ಸಿಲ್ಲದ ಮನಸ್ಸಿನಿಂದ ಶಿವನಿಗೆ ವಿಷವನ್ನು ಕುಡಿಯಲು ಕೊಡುತ್ತಾಳೆ. ಆ ವಿಷವನ್ನು ಶಿವನು ಸಂತೋಷದಿಂದ ಕುಡಿಯುತ್ತಾನೆ. ಏನಿದಾಶ್ಚರ್ಯ ಆ ವಿಷ ಶಿವನಿಗೆ ಬದಲಾಗಿ ಗೋರಾಜನಿಗೆ ತಗಲುತ್ತದೆ. ರಾಜ ವಿಲಿ ವಿಲಿ ಒದ್ದಾಡುತ್ತಾನೆ. ತನ್ನ ಗಂಡನಿಗೆ ಒದಗಿಸಿದ ಸಂಕಟವನ್ನು ನೋಡಲಾರದೆ ಅವನ ಹೆಂಡತಿಯೂ ಶಿವನ ಪಾದಕ್ಕೆ ಬಿದ್ದು ಕ್ಷಮೆ ಕೇಳಿಕೊಳ್ಳುತ್ತಾಳೆ. ಅವಳ ಮಾತನ್ನು ಮನ್ನಿಸಿ ಆಕೆಯ ಗಂಡನನ್ನು ಶಿವನು ಕಾಪಾಡುತ್ತಾನೆ. ತನ್ನ ತಪ್ಪಿಗೆ ಸರಿಯಾದ ಪ್ರಾಯಶ್ಚಿತ್ತವಾಯಿತೆಂದು ಶಿವನ ಪಾದಗಳ ಮೇಲೆ ಬಿದ್ದು ಗೋರಾಜನು ಬೇಡಿಕೊಳ್ಳುತ್ತಾನೆ. ಅಲ್ಲದೆ ನವಕೋಟಿ ಸಿದ್ಧರನ್ನು ಸಹ ನಿಜರೂಪಕ್ಕೆ ತಂದು ತಾನು ಶಿವದೀಕ್ಷೆಪಡೆದು ನವಕೋಟಿ ಸಿದ್ಧರೊಂದಿಗೆ ಬೆರೆತು ದೇಶ ಸಂಚಾರ ಮಾಡುತ್ತಾನೆ.

ಐತಿಹ್ಯ ೬ : ಕಲ್ಯಾಣಪುರದೊಳಗಿರುವ ಐತಿಹ್ಯವನ್ನು ಅಧ್ಯಾಯ ಒಂದರಲ್ಲಿ ಹೇಳಿಯಾಗಿದೆ.

೪

# ಬಂಧುತ್ವ ಮತ್ತು ವಿವಾಹ

ಬಂಧುತ್ವ ಹೊಂದುವುದು ಹಾಗೂ ವಿವಾಹವಾಗುವುದು ಜೀವನದ ಅತೀಮಹತ್ವದ ಘಟ್ಟಗಳಲ್ಲಿ ಒಂದು. ಪ್ರತಿಯೊಂದು ಸಮುದಾಯಗಳು ಬಂಧುತ್ವವನ್ನು ಏರ್ಪಡಿಸಿಕೊಳ್ಳಲು ತನ್ನದೇ ಆದ ರೀತಿಯಲ್ಲಿ ಸಂಪ್ರದಾಯಗಳನ್ನು ಹೊಂದಿರುತ್ತವೆ. ಬಂಧುತ್ವದಲ್ಲಿ ಅತೀ ಮುಹತ್ವದ ಪಾತ್ರ ವಹಿಸುವುದು ಬೆಡಗುಗಳು. ಬೆಡಗುಗಳು ಸಮುದಾಯದೊಳಗಿನ ಮನೆತನಗಳ ಮೂಲವನ್ನು ತಿಳಿಸುವಂಥವುಗಳು. ಪ್ರತಿಯೊಂದು ಕುಟುಂಬವೂ ಬೆಡಗುಗಳ ಆಧಾರದ ಮೇಲೆ ಬಂಧುತ್ವವನ್ನು ಏರ್ಪಡಿಸಿಕೊಳ್ಳುತ್ತವೆ. ಬೇರೆ ಬೇರೆ ಸಮುದಾಯಗಳು ಬೇರೆ ಬೇರೆ ಮಾನದಂಡಗಳ ಮೇಲೆ ಬಂಧುತ್ವ ಏರ್ಪಡಿಸಿಕೊಳ್ಳುವುದುಂಟು.

## ಕುಲ, ಬಳಿ, ಬೆಡಗು

ಬೆಡಗುಗಳು ಕರ್ನಾಟಕದಲ್ಲಿ ನೆಲೆನಿಂತ ಸುಡುಗಾಡು ಸಿದ್ದರಲ್ಲಿ ಪ್ರಮುಖವಾಗಿ ೩ ಕಟ್ಟೆಗಳಿವೆ. ೧. ಹರಪನಹಳ್ಳಿಯ ಕಟ್ಟೆ, ೨. ಗೋಲಕುಂಡ ಕಟ್ಟೆ, ೩. ಗದ್ವಾಲ ಕಟ್ಟೆ.

**೧. ಹರಪನಹಳ್ಳಿಯ ಕಟ್ಟೆಯ ಸುಡುಗಾಡುಸಿದ್ದರ ಕುಲಗಳು**

| | | |
|---|---|---|
| ೧. ಶೆಂಕಿನವರು | ೧೧. ವಿಭೂತಿಯವರು | ೨೧. ಕಲ್ಲಪರಿಯವರು |
| ೨. ಗಂಟಿಯವರು | ೧೨. ಪತಾಬಿರೋಳರು | ೨೨. ಹಂದಿಯವರು |
| ೩. ತೋಟದವರು | ೧೩. ಕಲ್ಯಾಣಮೋಲರು | ೨೩. ದೂಪದವರು |
| ೪. ಹಾವಿನವರು | ೧೪. ಮಾವಿನೋಳು | ೨೪. ರಾಚೊಟಿಯವರು |
| ೫. ವಲಾತ್ತಿಯವರು | ೧೫. ಹಾವಿನ ಗಂಟಿಯವರು | ೨೫. ಇಪ್ಪಿಯವರು |
| ೬. ಕೋಮಾರಿಯವರು | ೧೬. ಕೂಗಡಿಯವರು | ೨೬. ಮದ್ದಿಯವರು |
| ೭. ಉದಂಡಿಯವರು | ೧೭. ಬಸರಿಯವರು | ೨೭. ಸತಾಸಿನ್‌ರವರು |
| ೮. ಪರಿಯವರು | ೧೮. ಕಕ್ಕೇಳು | ೨೮. ಮಾವಡಿಯವರು |
| ೯. ಯಾಪಲೋಳರು | ೧೯. ಹಂಪಿ | |
| ೧೦. ಓಂಟೆತ್ತಿನವರು | ೨೦. ಕಿನ್ನೂರಿ | |

೨. ಗೋಲಕುಂಡ ಕಟ್ಟೆಯ ಕುಲಗಳು

೧. ಮ್ಯಾಕಲೋಳ
೨. ಪಸ್ತಮೋಳ
೩. ಪದ ಪತ್ಮೋಳ
೪. ಗುಂಡ್ಲಪಲೋಳ
೫. ತುಮ್ಮಲೇಳು
೬. ಮೋಡಿಮೊರು
೭. ಬೆಟಿಮಿಟ್ಮೋಳು
೮. ಕರ್ರ್ಮೊಳು
೯. ಇಪ್ಪೇಳು
೧೦. ಪತಾಬಿರೋಳು
೧೧. ಡೊಕ್ಕೊಳು
೧೨. ಗಟ್ಟಿಲೋಳು
೧೩. ಕಡಮಂಚೋಳು
೧೪. ಸಿನ್ನಿಪೆಂಡಿಲೋಳು

೩. ಗದ್ವಾಲ ಕಟ್ಟೆಯ ಕುಲಗಳು

೧. ಬಾದಿಗಿಯವರು
೨. ಮುಗೋರು
೩. ಆಲಟಿಗೇರಿ
೪. ಕಡಮಂಚಿಯವರು
೫. ಕೊಮಾರಿಯವರು
೬. ಬೊಮ್ಮಲಿಯವರು
೭. ತುಮ್ಮಲವರು
೮. ರುದ್ರಾಕ್ಷಿಯವರು

**೧. ಹರಪ್ಪನಹಳ್ಳಿಯ ಕಟ್ಟೆಗೆ ಬರುವ ಕುಟುಂಬಗಳು** ಸುಡುಗಾಡುಸಿದ್ದ ಹಾಗೂ ನಿರಂಜಯ್ಯನ ಎಂಬ ಎರಡು ಕಾಯಕ ಭಿಕ್ಷಾಟನೆ ಗಳನ್ನು ಮಾಡುತ್ತಾ ತಮ್ಮ ಉಪಜೀವನ ಮಾಡುತ್ತಾ ಬಂದಿದ್ದಾರೆ. ಇವರಲ್ಲಿ ಇರುವ ಬೆಡಗು ಅಥವಾ ಕುಲಗಳು ಇನ್ನೇರಡು ಕಟ್ಟೆಗಳಾದ ಬಹುರೂಪಿ ವೇಷಗಾರರು ಬುಡ್ಗಜಂಗಮರು ಮತ್ತು ರಾಮಕೊಂಡರು ಕುರುಕುರು ಮಾಮಾ ಹಾಗೂ ಗದ್ವಾಲು ಕಟ್ಟೆಯ ಬಾಜಾಪಂತದವರು ಪಸ್ತಕವನ್ನು ಆಧಾರ ವಾಗಿಟ್ಟುಕೊಂಡುವರು ಇವರಲ್ಲಿ ಕೂಡಾ ಇರುತ್ತವೆ.

**೨. ಗೋಲಕುಂಡ ಕಟ್ಟೆ** ಇಲ್ಲಿ ಬರುವ ಕುಟುಂಬಗಳು ಬುಡ್ಗಜಂಗಮರು, ಬಹುರೂಪಿ ಬಾಲಸಂತ, ಹಗಲುವೇಷಗಾರ, ಬುರ್‌ಕಥೆಯವರು, ಕುರುಕುರ ಮಾಮಾ, ಕೊಂಡಮಾಮಾ, ಬೈರಾಗಿ ಮೇತ್ರಿ, ಕೆ ಎಂ... ೨೦೦೫ : ಗ್ರಾಮೀಣ ಜನತೆಗೆ ಮನರಂಜನೆ ನೀಡುವುದಕ್ಕಾಗಿ ಹಲವಾರು ರೀತಿಯ ವೇಷಗಳನ್ನು ಹಾಕಿ ಜನರಿಂದ ಹಣ ಪಡೆದು ಜೀವನ ಸಾಗಿಸುತ್ತಿದ್ದರು. ಸ್ತ್ರೀ ಪುರುಷರು ರಾತ್ರಿ ವೇಳೆಯಲ್ಲಿ ವಿವಿಧ ರೀತಿಯ ಕಥೆಗಳನ್ನು ಹೇಳುತ್ತಾ ಹಾಡುತ್ತಾ ಮನರಂಜನೆಯನ್ನು ನೀಡಿ ಜನರಿಂದ ಹಣ ಪಡೆದು ಜೀವನ ಸಾಗಿಸುತ್ತಿದ್ದರು. ಇವರಲ್ಲಿಯೇ ಕೆಲವು ಕುಟುಂಬದವರು ಕುರುಕುರ್ ಮಾಮಾ, ಕೊಂಡಮಾಮಾ, ರಾಮಕೊಂಡರು ಕೈಯಲ್ಲಿ ಬುರ್‌ಕಾಯಿ ಏಕನಾಥವನ್ನು ಹಾಗೂ ತಲೆಯ ಒಂದು ಬದಿಗೆ ಜುಟ್ಟನ್ನು ಕಟ್ಟಿಕೊಂಡು ಆ ಜುಟ್ಟಕ್ಕೆ ನವಿಲುಗರಿಯನ್ನು ಚುಚ್ಚಿಕೊಂಡು ಬಿಳಿಪಂಚೆ ಕೊರಳಲ್ಲಿ ಕರಿಮಣಿಸರ, ಹುಲಿಯ ಹಲ್ಲಿನಿಂದ ಕೂಡಿದ ಚೌಕಾಕಾರದ ತಾಯತಾ, ಕಾಲಲ್ಲಿ ಕಡಗ, ಇವುಗಳನ್ನು ಧರಿಸಿಕೊಂಡು ಶ್ರೀರಾಮನ ಅವತಾರವನ್ನು ಹೊಂದಿದವರಂತೆ ಕಂಡು ಅವರದೇ ಆದ ದಾಟಿ, ಗತ್ತಿನಲ್ಲಿ ಹಾಡುತ್ತಾ, ಜನರಿಗೆ ಭವಿಷ್ಯವನ್ನು ಹೇಳುವುದರ ಜೊತೆಗೆ ನಾಟಿ ವೈದ್ಯರಾಗಿ ಜೀವನ ಸಾಗಿಸುತ್ತಾರೆ. ಇವರಲ್ಲಿ ಕೂಡ ಸುಡುಗಾಡ ಸಿದ್ದರಲ್ಲಿ ಹಾಗೂ ಬಾಜಪಂತರಲ್ಲಿಯು ಕೆಲವು ಬೆಡಗುಗಳು ಇರುತ್ತವೆ.

೩. ಗದ್ವಾಲ ಕಟ್ಟೆ ಈ ಕಟ್ಟೆಯಲ್ಲಿ ಬರುವ ಬೆಡಗುಗಳು ಅತಿ ಕಡಿಮೆ ಇದ್ದು, ಇವರಲ್ಲಿರುವ ಕೆಲವು ಬೆಡಗುಗಳು ಮೇಲಿನ ಎರಡು ಕಟ್ಟೆಯ ಕುಟುಂಬಗಳಲ್ಲಿವೆ. ಇವರು ತಮ್ಮ ಕುಟುಂಬಗಳ ನಿರ್ವಹಣೆಗಾಗಿ ಅಂಗೈಯಲ್ಲಿ ಲಕ್ಷ್ಮಿದೇವಿಯ ಫೋಟೋವನ್ನು ಹಿಡಿದು ಕೊಂಡು ತೆಲುಗಿನಲ್ಲಿ ಇಸರಕಾನೆ ಎಂದು ಕರೆಯುತ್ತಾರೆ ದೇವರ ಸ್ಮರಣೆ ಮಾಡುತ್ತಾ ಜನರಿಗೆ ಭವಿಷ್ಯವನ್ನು ಹೇಳುತ್ತಾ ಜೀವನಸಾಗಿಸುತ್ತಾ ಬಂದಿದ್ದಾರೆ. ಇವರಿಗೆ ನೆಲಚೇರಿ ಜಂಗಾಲು ಎಂದೂ ಕರೆಯುತ್ತಾರೆ. ಹಾಗೂ ಇನ್ನೊಂದು ಇವರ ಕಸುಬು ಮುಷ್ಠಿ ಭಿಕ್ಷಾಟನೆ ಇವರು ಪ್ರತಿ ಮನೆಯ ಭಿಕ್ಷಾಟನೆ ಕೇಳುವದಲ್ಲದೆ ಭಿಕ್ಷೆಗೆಂದು ದವಸ ಧಾನ್ಯಗಳನ್ನು ತಂದಾಗ ಅವರಿಂದ ಒಂದೇ ಮುಷ್ಠಿಯಷ್ಟು ಧಾನ್ಯವನ್ನು ತೆಗೆದುಕೊಂಡು ಹರಸುತ್ತಾರೆ. ಈ ಭಿಕ್ಷಾಟನೆ ಯನ್ನು ಕ್ರಮವಾಗಿ ನಿಲ್ಲಿಸಿದ್ದಾರೆ.

ಈ ಮೂರು ಕಟ್ಟೆಯಲ್ಲಿ ಬರುವಂತಹ ಕುಟುಂಬಗಳಲ್ಲಿ ಕಾಯಕದಿಂದ ಬೇರೆಯವ ರಾಗಿದ್ದಾರೆ. ತಮ್ಮ ಕುಟುಂಬಗಳ ನಿರ್ವಹಣೆಗಾಗಿ ಭಿಕ್ಷಾಟನೆಯ ವೃತ್ತಿಯನ್ನು ಬೇರೆ ಬೇರೆ ರೀತಿಯಲ್ಲಿ ಕೈಕೊಂಡು ಜೀವನ ಸಾಗಿಸುತ್ತಾ ಬಂದಿದ್ದಾರೆ. ಇವರ ಸಾಮಾಜಿಕ ವ್ಯವಸ್ಥೆ, ವಿವಾಹ ಪದ್ಧತಿ, ಭಾಷೆ, ಕುಲ ಪಂಚಾಯಿತಿ ವ್ಯವಸ್ಥೆ, ಜನನ, ಮರಣ, ಆಚಾರ, ವಿಚಾರ, ವಿಧಿನಿಷೇಧಗಳು ಹೊರ ನೋಟಕ್ಕೆ ಒಂದೆಯಾಗಿ ಕಂಡುಬಂದರೂ ಸೂಕ್ಷ್ಮವಾಗಿ ಪರಿಶೀಲಿಸಿ ದಾಗ ಆಚಾರ ವಿಚಾರಗಳಲ್ಲಿ ಸೂಕ್ಷ್ಮವ್ಯತ್ಯಾಸ ಕಂಡುಬರುತ್ತವೆ. ಒಟ್ಟಾರೆ ಮೂರು ಕಟ್ಟೆಯ ಬೆಡಗುಗಳು ಮೊದಲಿನಿಂದ ರಕ್ತ ಸಂಬಂಧವನ್ನು ಹಂಚಿಕೊಂಡು ಬಂದಿವೆ.

ಸುಡುಗಾಡು ಸಿದ್ಧರಲ್ಲಿ ಕುಲ, ಬೆಡಗುಗಳು ಅಧ್ಯಯನ ಮಾಡಲಾಗಿ ಅವರಲ್ಲಿ ಹರಪನ ಹಳ್ಳಿ ಕಟ್ಟೆ, ಗೋಲಕುಂಡಾ ಕಟ್ಟೆ, ಗದ್ವಾಲ ಕಟ್ಟೆ ಎಂದು ಕರೆಯುವುದುಂಟು. ಇವರ ಮೂರು ಕಟ್ಟೆಗಳಲ್ಲಿ ಒಂದೇ ಸಾಮರಸ್ಯವಿದೆ. ಒಂದು ಕಟ್ಟೆಯಲ್ಲಿ ಇರುವ ಬೆಡಗಿನವರು ಇನ್ನೊಂದು ಕಟ್ಟೆಯಲ್ಲಿಯೂ ಕೂಡಾ ಅದೇ ಕುಲ ಬೆಡಗಿನವರು ಇರುತ್ತಾರೆ. ಹೀಗಾಗಿ ಮೂರು ಕಟ್ಟೆಯಲ್ಲಿರುವ ಬೆಡಗುಗಳು ಒಂದೆಯಾಗಿದ್ದರು ಇವರ ಮೂಲ ವೃತ್ತಿಗಳು ಮಾತ್ರ ಬೇರೆ ಬೇರೆಯಾಗಿರುತ್ತದೆ. ಅವರು ಮಾಡುವ ವೃತ್ತಿಯಿಂದಾಗಲಿ ಅಥವಾ ಕುಲಕಸುಬಿನಿಂದಾಗಲಿ ಇವರನ್ನು ಇಂತಹ ಕಟ್ಟೆಯ ಜನ ಎಂದು ಗುರುತಿಸಬಹುದು. ಈ ಮೇಲಿನ ಮೂರು ಕಟ್ಟೆಯ ರಕ್ತಸಂಬಂಧಗಳು ಹೆಣ್ಣನ್ನು ಕೊಡುವುದು, ತೆಗೆದುಕೊಳ್ಳುವುದು ಮೊದಲಿನಿಂದಲೂ ಬೆಳೆದುಬಂದಿದೆ. ಅವರಲ್ಲಿರುವ ಧರ್ಮಾಚರಣೆ, ಆಚಾರ, ವಿಚಾರ, ಸಂಪ್ರದಾಯ, ನಂಬಿಕೆಗಳು ಒಂದೆಯಾಗಿವೆ. ಅತಿಸೂಕ್ಷ್ಮ ರೀತಿಯಲ್ಲಿ ವಿಚಾರಿಸಿದಾಗ ಗೋಲಕುಂಡಾ ಮತ್ತು ಗದ್ವಾಲ ಕಟ್ಟೆಯವರಲ್ಲಿ ಸ್ವಲ್ಪ ವ್ಯತ್ಯಾಸವಿರುವುದು ಕಂಡುಬರುತ್ತದೆ. ಮೊದಲನೆಯದಾಗಿ ಅವರು ಕೈಗೊಂಡ ಕುಲಕಸುಬುಗಳು, ಆಚರಿಸುವ ಸಂಪ್ರದಾಯಗಳು ಸ್ವಲ್ಪ ಮಟ್ಟಿಗೆ ಬೇರೆಯಾಗಿವೆ. ಇವರಲ್ಲಿ ಒಂದು ಬೆಡಗಿನ ಮನೆತನದವರು ಬೇರೆ ಬೇರೆ ಬೆಡಗಿನ ಮನೆತನಗಳಲ್ಲಿ ರಕ್ತಸಂಬಂಧ ಬೆಳೆಸಿದ್ದಾರೆ. ಒಂದೇ ಬೆಡಗುಗಳಲ್ಲಿ ಸಂಬಂಧಗಳು ಮಾಡುವುದಿಲ್ಲ. ಒಂದೇ ಬೆಡಗಿನವರು ಅಣ್ಣ ತಮ್ಮಂದಿರಾಗಿರುತ್ತಾರೆ. ಇನ್ನಿತರ ಜಾತಿಗಳಲ್ಲಿ

ರುವಂತೆ ಇವರಲ್ಲಿಯೂ ಕೂಡಾ ಸಂಸ್ಕೃತಿ ಆಚಾರ ವಿಚಾರ, ವಿಧಿನಿಷೇಧಗಳು ಇರುತ್ತವೆ. ಪ್ರತಿಯೊಂದು ಮನೆತನದ ಚರಿತ್ರೆಯನ್ನು ಈ ಬೆಡಗುಗಳು ಹೇಳುತ್ತವೆ.

ಸುಡುಗಾಡು ಸಿದ್ಧರು ಭಿಕ್ಷಾಟನೆ ಜೊತೆಗೆ ಇತರ ಸಣ್ಣಪುಟ್ಟ ಉದ್ಯೋಗವನ್ನು ಕೈಗೊಂಡಿದ್ದಾರೆ. ಆ ವೃತ್ತಿಯ ಆಧಾರದ ಮೇಲೆ ಮನೆತನದ ಹೆಸರು, ಬೆಡಗುಗಳಿಂದ ಇವರನ್ನು ಗುರುತಿಸಬೇಕಾಗುತ್ತದೆ.

ಒಂಟೆತ್ತಿನವರು ಕಾಡಿನಲ್ಲಿ ಬೆಳೆದ ವನಸ್ಪತಿಗಳನ್ನು ಒಂಟೆಯ ಅಥವಾ ಒಂದೆತ್ತಿನ ಬಂಡಿಯ ಮೇಲೆ ಹೇರಿಕೊಂಡು ಹೋಗುತ್ತಿದ್ದುದರಿಂದ ಇವರಿಗೆ ಒಂಟೆತ್ತಿನವರೆಂದು ಕರೆದಿರಬಹುದು.

ಕೊಮಾರಿಯವರು ಮದುವೆಯಲ್ಲಿ ಅವರಿಗೆ ಬೇಕಾಗುವಷ್ಟು ಅರಿಶಿಣವನ್ನು ಕೊಡುತ್ತಿದ್ದರು. ಹೀಗಾಗಿ ಇವರನ್ನು ಕೊಮಾರಿಗಳೆಂದು ಕರೆಯಲಾಯಿತು.

ಪರಿಯವರು ಪರ್‍ಯಾಣ ವ್ಯಾಪಾರವನ್ನು ಮಾಡುತ್ತಿದ್ದುದರಿಂದ ಇವನರನ್ನು ಪರಿಯವರು ಎಂದು ಕರೆಯಲಾಯಿತು.

ಗಂಟೆಯವರು ದೇವರ ಸೇವೆಯನ್ನು ಮಾಡುವಾಗ ಯಾವಾಗಲು ಇವರೆ ಗಂಟೆ ಬಾರಿಸುತ್ತಿದ್ದರೆಂದು ಅಲ್ಲದೆ ಗಂಟೆಯ ವ್ಯಾಪಾರವನ್ನು ಮಾಡುವುದರಿಂದ ಈ ಕುಟುಂಬದವರಿಗೆ ಗಂಟೆಯವರು ಎಂದು ಕರೆಯಲಾಯಿತು.

ವಿಭೂತಿಯವರು ವಿಭೂತಿ ಕಲ್ಲುಗಳನ್ನು ಸಂಗ್ರಹಿಸಿ ದೇವರಿಗೆ ಕೊಡುವುದರ ಜೊತೆಗೆ ವಿಭೂತಿ ಮಾರಾಟ ಮಾಡುವ ಕಾಯಕದಲ್ಲಿ ನಿರತರಾಗಿರುವುದರಿಂದ ವಿಭೂತಿ ಎಂದು ಕರೆಸಿಕೊಂಡರು.

ಶಂಕಿನವರು ಸಮುದ್ರ ತೀರದಲ್ಲಿದ್ದ ಶಂಕುಗಳನ್ನು ಮಾರಾಟಮಾಡುತ್ತಿದ್ದರೆಂದು ಇವರಿಗೆ ಶಂಕಿನವರೆಂದು ಕರೆಯಲಾಯಿತು.

ಕಿನ್ನೂರಿ ಒಣಗಿದ ಕುಂಬಳಕಾಯಿಗೆ ತಂತಿಯನ್ನು ಸಿಗಿಸಿ ತುಂತಿನಿಯಂತೆ ಮಾಡಿ ಹಾಡುವ ಕಲೆಯಲ್ಲಿ ತೊಡಗಿರುವುದರಿಂದ ಇವರಿಗೆ ಕಿನ್ನೂರಿ ಎಂದು ಕರೆಯಲ್ಪಟ್ಟರು.

ಉದ್ದಂಡ್ಡಿ ದೇವರ ಸೇವೆಗಾಗಿ ಹೂವು ಪತ್ರಿ ಮತ್ತು ಗಿಡಮೂಲಿಕೆಗಳನ್ನು ಕೊಡುತ್ತಿದ್ದರು. ಇವರ ಸೇವೆಯನ್ನು ಗಮನಿಸಿ ಉದ್ದಾಂಡಿಯವರೆಂದು ಕರೆದರು.

ಅಕ್ರಮ ಸಂಬಂಧದಿಂದ ಹುಟ್ಟಿದ ಬೆಡಗುಗಳು

ಸುಡುಗಾಡು ಸಿದ್ಧರ ಸಮುದಾಯದಲ್ಲಿ ಪ್ರತಿಯೊಬ್ಬರು ಸಮಾಜದ ಕಟ್ಟು ಪಾಡುಗಳನ್ನು ಪಾಲಿಸಿಕೊಂಡು ಬರುತ್ತಾರೆ. ಒಂದು ವೇಳೆ ಇವರಿಂದ ಅನ್ಯಾಯ, ಅತ್ಯಾಚಾರ ಇಲ್ಲವೆ ವ್ಯಭಿಚಾರ ನಡೆದಿದ್ದರೆ ಅಂಥವರನ್ನು ಶಿಕ್ಷಿಸಿ ದಂಡವಿಧಿಸುತ್ತಾರೆ. ಇವರಲ್ಲಿ ಒಂದೇ ಬೆಡಗಿನಲ್ಲಿ ಹೆಣ್ಣನ್ನು ಕೊಡುವುದಾಗಲಿ ತೆಗೆದುಕೊಳ್ಳುವುದಾಗಲಿ ಅಥವಾ ರಕ್ತಸಂಬಂಧಗಳು ನಡೆಯುವುದಿಲ್ಲ. ಒಂದು ವೇಳೆ ಒಂದೇ ಬೆಡಗಿನವರೊಂದಿಗೆ ಕದ್ದು, ಪ್ರೀತಿಸಿ ಇಲ್ಲವೆ ಹೆಣ್ಣು ಮಗಳನ್ನು ಓಡಿಸಿಕೊಂಡು ಹೋದಲ್ಲಿ ಅಂಥವರು ಸಮಾಜದಿಂದ ಬಹಿಷ್ಕಾರಿ

ಸಲ್ಪಡುತ್ತಾರೆ. ಅಲ್ಲದೆ ಇಂತಹ ಕುಟುಂಬದವರೊಂದಿಗೆ ಬಳಕೆ ಮಾಡುವುದಾಗಲಿ, ಶುಭ ಸಮಾರಂಭಗಳಲ್ಲಿ ಭಾಗವಹಿಸದ ಹಾಗೆ ನೋಡಿಕೊಳ್ಳುತ್ತಾರೆ. ಒಂದು ವೇಳೆ ಬಹಿಷ್ಕಾರಕ್ಕೆ ಒಳಗಾದ ಕುಟುಂಬದವರು ಸಮುದಾಯದಲ್ಲಿ ಬೆರೆಯಲು ಬಯಸಿ ಬಂದಲ್ಲಿ ಸಮುದಾಯದ ಹಿರಿಯರೆಲ್ಲರು ಸೇರಿ ಗಡವ ಪಂಚಾಯಿತಿ ನಡೆಸುವ ನ್ನು ನಿರ್ಧರಿಸುತ್ತಾರೆ. ಅದರಂತೆ ಎಲ್ಲ ಹಿರಿಯರು ಕುಲಪಂಚಾಯಿತಿ ನಡೆಸಿ ಎಂತಹ ತಪ್ಪುಗಳು ಇವರಿಂದ ಜರಿಗಿವೆ. ಇಲ್ಲಿಯವರೆಗೆ ಇಂತಹ ತಪ್ಪುಗಳು ಆದ ಉದಾಹರಣೆಗಳೊಂದಿಗೆ ಹಾಗೂ ಇಂಥವರಿಗೆ ಯಾವ ತೀರ್ಪನ್ನು ತೆಗೆದುಕೊಂಡಿದ್ದಾರೆ. ಇವೆಲ್ಲವುಗಳನ್ನು ಪರಿಗಣಿಸಿ ಇಂಥವರನ್ನು ಮೂಲ ಬೆಡಗಿನಲ್ಲಿ ಸೇರಿಸಿಕೊಳ್ಳದೆ ನಡೆದ ತಪ್ಪಿನ ಸಂದರ್ಭಾನುಸಾರವಾಗಿ ಶಿಕ್ಷೆ, ದಂಡವನ್ನು ವಿಧಿಸಿ ಸಮುದಾಯ ದಲ್ಲಿ ಹೊಸ ಬೆಡಗನ್ನು ಇವರಿಗಾಗಿ ಸಾರಿ. ಇನ್ನು ಮುಂದೆ ಇವರನ್ನು ಇಂತಹ ಬೆಡಗಿನವರು ಎಂದು ಕರೆಯಲು ನಿರ್ಧರಿಸಿ ಸಮುದಾಯದಲ್ಲಿ ಅಥವಾ ಜಾತಿಯಲ್ಲಿ ಸೇರಿಸಿಕೊಳ್ಳುತ್ತಾರೆ. ಈ ರೀತಿಯ ಹೊಸ ಬೆಡಗುಗಳನ್ನು ಇವರಲ್ಲಿ ಕಾಣಬಹುದು.

**ಹಂದ್ಯೋಳ** ಸುಡುಗಾಡು ಸಿದ್ಧರಲ್ಲಿ ಹಂದಿಯನ್ನು ಹೀನ ಪ್ರಾಣಿ ಮತ್ತು ಅದನ್ನು ಮುಟ್ಟಿದರೆ ಸ್ನಾನ ಮಾಡಿ ಮನೆಯಲ್ಲಿ ಪ್ರವೇಶ ಮಾಡುವರು. ಇವರಲ್ಲಿ ಹಂದಿ ಸಾಕಿದ ಕಾರಣಕ್ಕಾಗಿ ಸಮುದಾಯದಿಂದ ಹೊರ ಹಾಕಲ್ಪಟ್ಟು ನಂತರ ಸಮುದಾಯವನ್ನು ಬಯಸಿ ಬಂದಾಗ ಇವರನ್ನು ಶಿಕ್ಷಿಸಿ ಹಂದ್ಯೋಳ ಎಂಬ ಹೊಸ ಬೆಡಗಿನೊಂದಿಗೆ ಕರೆಹತ್ತಿದರು.

**ಕಲ್ಪರಿಯೋಳ** ಸುಡುಗಾಡು ಸಿದ್ಧರ ಹೆಣ್ಣು ಮಗಳು ಸೇಂದಿ ಮಾರುವವನ ಜೊತೆಗೆ ಆಕ್ರಮ ಸಂಬಂಧ ಇಟ್ಟುಕೊಂಡ ಕಾರಣ ಕುಲಪಂಚಾಯತಿಯವರು ತಲೆಯ ಮೇಲೆ ಸೇಂದಿ ತುಂಬಿದ ಮಡಿಕೆಯನ್ನಿಟ್ಟುಕೊಂಡು ಪ್ರಮಾಣ ಮಾಡಿಸುವಾಗ ತಲೆಯ ಮೇಲಿನ ಸೇಂದಿ ತುಂಬಿದ ಮಡಕೆ ಒಡೆದಿರುವುದರಿಂದ ಇಂಥವರನ್ನು ಕಲ್ಪರಿಯೋಳು ಎಂಬ ಹೊಸ ಬೆಡಗಿನಿಂದ ಕರೆದರು ಎಂದು ಹೇಳಲಾಗುವುದು.

**ಬಸಿರ್‍ಯೋಳು** ಚಿಕ್ಕಪ್ಪನ ಜೊತೆಗೆ ಅನೈತಿಕ ಸಂಬಂಧವಿರಿಸಿಕೊಂಡಿದಕ್ಕೆ ಕುಲಪಂಚಾಯಿತಿ ಯವರು ಬಸರಿಗಿಡದ ಕೆಳಗೆ ನ್ಯಾಯ ಪಂಚಾಯತಿಯನ್ನು ನಡೆಸಿ ಬಸಿರ್‍ಯೋಳ ಎಂದು ಕರೆದರು ಎನ್ನಲಾಗುತ್ತದೆ.

**ಕೂಗಡಿ** ಕೂಗಡಿ ಮರದ ಕೆಳಗೆ ಪಂಚಾಯತಿ ನಡೆಸಿ ಅವರು ಮಾಡಿದ ಅನೈತಿಕ ಸಂಬಂಧವನ್ನು ಕೂಗಡಿ ಎಂಬ ಮರಕ್ಕೆ ಕಟ್ಟುಹಾಕಿರುವ ಹಿನ್ನೆಲೆಯಲ್ಲಿ ಕೂಗಡಿ ಬೆಡಗಿನವರು ಎಂದು ನಾಮಕರಣಮಾಡಲಾಯಿತ್ತೆಂದು ಹೇಳಲಾಗುವುದು.

**ಹಂಪ್ಯೋಳು** ಮೈದುನನ ಜೊತೆಗೆ ಅನೈತಿಕ ಸಂಬಂಧವಿಟ್ಟುಕೊಂಡ ಕಾರಣ ಹಂಪಿಯಲ್ಲಿ ಒಂದು ಮರದ ಕೆಳಗೆ ಕುಲಪಂಚಾಯಿತಿ ನಡೆಸಿ ತಪ್ಪು ಮಾಡಿದವನು ಒಪ್ಪಿಕೊಳ್ಳದಿದ್ದಾಗ ಮರದ ಎಲೆಯನ್ನು ಮುಟ್ಟಿ ಪ್ರಮಾಣ ಮಾಡಲು ತಿಳಿಸಿದಾಗ ಅದರಂತೆ ಅಪರಾಧಿಯು ಮರದ ಎಲೆಯನ್ನು ಮುಟ್ಟಿ ಪ್ರಮಾಣ ಮಾಡುವ ಸಂದರ್ಭದಲ್ಲಿ ಮರದ ಕೊಂಬೆ ಮುರಿದು ಬಿದ್ದ ಕಾರಣ ತಪ್ಪು ಮಾಡಿದ್ದು ನಿಜವೆಂದು ಗುರುತಿಸಿ ಕುಲಪಂಚರು ಇವರಿಗೆ ಹಂಪ್ಯೋಳು ಎಂಬ ಹೊಸಬೆಡಗಿನಿಂದ ಕರೆಯಲು ತಿರ್ಮಾನಿಸಿದರು.

ಹೀಗೆ ಅಕ್ರಮ ಸಂಬಂಧಗಳನ್ನು ಇಟ್ಟುಕೊಂಡಿರುವುದರಿಂದ ಈ ಸಮುದಾಯದ ಹಿರಿಯರು ಕುಲಪಂಚಾಯತಿಗಳನ್ನು ಮರಗಳ ಕೆಳಗೆ ನಡೆಸಿ ಎರಡುಸಲ ಕೊಡಲಿಯಿಂದ ಕಚ್ಚು ಹಾಕಿ ಹೊಸ ಬೆಡಗನ್ನು ಗುರಿತಿಸುವ ಮೂಲಕ ಇಂತಹ ಕುಟುಂಬಗಳು ಮೂಲ ಬೆಡಗುಗಳಿಂದ ರಕ್ತಸಂಬಂಧ ಬೆಳೆಸುವುದಿಲ್ಲ. ಇವರು ಹೊಸ ಬೆಡಗಿನಿಂದ ಗುರುತಿಸಿ ಕೊಳ್ಳುವದರ ಜೊತೆಗೆ ಆ ಬೆಡಗಿನಿಂದಲೆ ಕರೆಯಹತ್ತಿದರು.

## ಹೆಣ್ಣು, ತೆರ, ಮದುವೆ

ಸುಡುಗಾಡು ಸಿದ್ಧರು ಮೊದಲಿನಿಂದ ತಮ್ಮದೇ ಆದ ಸಂಪ್ರದಾಯ ಆಚಾರ ವಿಚಾರ ಗಳನ್ನು ಪಾಲಿಸಿಕೊಂಡು ಬಂದಿರುತ್ತಾರೆ. ಇವರಲ್ಲಿ ಮದುವೆಗೆ ಸಂಬಂಧಿಸಿದ ಆಚರಣೆಗಳು ಇತರೆ ಸಮುದಾಯಗಳಿಗಿಂತ ಭಿನ್ನವಾಗಿವೆ. ಇವರು ತಮ್ಮ ಹೆಣ್ಣು ಮಕ್ಕಳನ್ನು, ಒಳಪಂಗಡ ಗಳಲ್ಲಿ ಹಾಗೂ ತಮ್ಮ ಸಮೀಪ ಸಂಬಂಧಿಕರಾದ ತಾಯಿಯ ತಮ್ಮನಿಗೆ ಇಲ್ಲವೇ ತಾಯಿಯ ಅಣ್ಣನ ಮಗನಿಗೆ ಮದುವೆ ಮಾಡಿಕೊಡುತ್ತಾರೆ. ವಿಜಾತಿ ಬೆಡಗುಗಳ ಆಧಾರದ ಮೇಲೆ ಹೆಣ್ಣನ್ನು ನಿಶ್ಚಯಿಸಿ ಮದುವೆಯಾಗುತ್ತಾರೆ. ಇವರಲ್ಲಿ ಅಕ್ಕನ ಮಗಳನ್ನು ತಂದು ಕೊಳ್ಳು ತ್ತಾರೆ. ಹೆಣ್ಣನ್ನು ನಿಶ್ಚಯಿಸುವಾಗ ಕುಟುಂಬದವರು ಹೆಣ್ಣಿನ ಒಪ್ಪಿಗೆಯನ್ನು ಪಡೆಯುವುದಿಲ್ಲ. ಅದರಂತೆ ಗಂಡಿನ ಒಪ್ಪಿಗೆಯನ್ನು ಸಹ ಕೇಳುವುದಿಲ್ಲ. ಹೆಣ್ಣು ಬೇಕೆನಿಸಿದಾಗ ಗಂಡಿನ ತಂದೆ ತಾಯಿಯವರು ಹೆಣ್ಣು ಇದ್ದ ಮನೆಗೆ ಹೋಗಿ ಸಂಬಂಧ ಬೆಳೆಸಲು ಕೇಳಿಕೊಳ್ಳುತ್ತಾರೆ. ಹೆಣ್ಣಿನ ಮನೆಯವರು ಹೆಣ್ಣನ್ನು ಕೊಡಲು ಸೂಚಿಸಿದರೆ ಗಂಡಿನ ಮನೆಯವರು ಸಮುದಾಯದ ಹಿರಿಯರೊಂದಿಗೆ ಹೆಣ್ಣಿನ ಮನೆಗೆ ಹೋಗಿ ಹೆಣ್ಣು ನೋಡುವ ಶಾಸ್ತ್ರ ಮಾಡುತ್ತಾರೆ. ತರುವಾಯ ಎಲ್ಲರ ಒಪ್ಪಿಗೆ ಪಡೆದು ನಂತರ ಎರಡು ಕುಟುಂಬದ ಸಂಬಂಧಿಕ ರೆಲ್ಲರೂ ಕೂಡಿ ಹೆಣ್ಣನ್ನು ನಿಶ್ಚಯ ಮಾಡುವರು. ಇವರಲ್ಲಿ ಹೆಣ್ಣು ನಿಶ್ಚಯಿಸಿದ ನಂತರ ಹಿರಿಯರ ಸಲಹೆಯಂತೆ ಅಳಿಯನಾಗ ಬಯಸುವವನು ಅತ್ತೆ ಮಾವಂದಿರು ಭಾವಿ ಅಳಿಯನ ಗುಣವನ್ನು ಹಾಗೂ ನಡತೆ ಮತ್ತು ಬೇರೆಯವರೊಂದಿಗಿನ ನಡೆ, ನುಡಿ, ಮನೆಯ ಕೆಲಸ ಇವೆಲ್ಲವುಗಳನ್ನು ಪರೀಕ್ಷಿಸುವುದರ ಸಲುವಾಗಿ ಒಂದು ವರ್ಷದವರೆಗೆ ತಂದೆ ತಾಯಿ ಮನೆಯನ್ನು ತೊರೆದು ಹೆಣ್ಣಿನ ಮನೆಯಲ್ಲಿ ಇರಬೇಕಾಗುತ್ತದೆ. ಇದಕ್ಕೆ ಅವರ ಭಾಷೆಯಲ್ಲಿ ಮ್ಯಾರಾ ಎಂದು ಕರೆಯುತ್ತಾರೆ. ಈ ಸಮಯದಲ್ಲಿ ಹೆಣ್ಣಿನ ತಂದೆ ತಾಯಿಯ ಊರಿಂದ ಊರಿಗೆ ಭಿಕ್ಷೆಗೆಂದು ಹೋದರೆ ಅವರ ಜೊತೆ ಹೋಗಬೇಕಾಗುತ್ತದೆ. ಅಲ್ಲದೆ ಅವನು ಕೂಡಾ ಭಿಕ್ಷೆಬೇಡಿ ಬಂದ ಸಂಪಾದನೆಯಲ್ಲಿ ಹೆಣ್ಣಿನ ತಂದೆ ತಾಯಿಯವರಿಗೆ ಕೊಡಬೇಕು. ಈ ಸಮಯದಲ್ಲಿ ಅತ್ತೆ ಮಾವಂದಿರ ಸೇವೆ ಮಾಡಿ ಹೌದು ಎನಿಸಿಕೊಳ್ಳಬೇಕು. ಒಂದು ವೇಳೆ ಇವನು ಸರಿಯಾದ ರೀತಿಯಲ್ಲಿ ನಡೆದುಕೊಳ್ಳದೆ ಇದ್ದಲ್ಲಿ ಅವನಲ್ಲಿ ಏನಾದರೂ ದುರ್ನಡತೆಗಳು ಕಂಡಬಂದಲ್ಲಿ ಅವನನ್ನು ಮನೆಯಿಂದ ಹೊರದಬ್ಬಿ ಹೆಣ್ಣನ್ನು ಕೊಡಲು ನಿರಾಕರಿಸುತ್ತಾರೆ. ಕೊನೆಗೆ ಯಾವ ಕಾರಣದಿಂದ ಒತ್ತಡ ತಂದರೂ ಅಂಥವನಿಗೆ ಹೆಣ್ಣನ್ನು ಕೊಡುವುದಿಲ್ಲ ಮತ್ತು ಇಂತಹ ಸಂದರ್ಭದಲ್ಲಿ ಸಮುದಾಯದ ಹಿರಿಯರು ಕೂಡಾ ನಡತೆ

ಸರಿಯಿಲ್ಲದ ಕಾರಣ ಇವನಿಗೆ ಹೆಣ್ಣನ್ನು ಕೊಡಲು ನಿರಾಕರಿಸಿದ್ದಾರೆ ಎಂದು ತಮ್ಮಲ್ಲಿ ತಿಳಿದುಕೊಳ್ಳುತ್ತಾರೆ. ಇತ್ತೀಚೆಗೆ ಈ ಪದ್ಧತಿಯು ಕ್ರಮೇಣ ಕಡಿಮೆಯಾಗುತ್ತಿದೆ.

ತೆರ ಸುಡುಗಾಡು ಸಿದ್ಧರಲ್ಲಿ ಮೊದಲಿನಿಂದಲೂ ತೆರ ಕೊಟ್ಟು ಹೆಣ್ಣನ್ನು ಮದುವೆ ಮಾಡಿಕೊಳ್ಳುವ ಸಂಪ್ರದಾಯ ಜಾರಿಯಲ್ಲಿದೆ. ತೆರ ಕೊಡುವ ಪದ್ಧತಿಯು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿದೆ. ಹೆಣ್ಣನ್ನು ನಿಶ್ಚಯ ಮಾಡುವ ಸಂದರ್ಭದಲ್ಲಿ ಸಮುದಾಯದ ಹಿರಿಯರ ಸಮ್ಮುಖದಲ್ಲಿ ೧೬ ರೂ.ಗಳನ್ನು ಹೆಣ್ಣಿಗೆ ತೆರವಾಗಿ ಕೊಡಲಾಗುವುದು ಹಾಗೂ ಸೀರೆ, ಕುಪ್ಪಸ, ನಾಲ್ಕಣೆ ತೂಕದ ಬಂಗಾರ ಕೊಡುವ ಪದ್ಧತಿ ಇರುತ್ತದೆ. ಇನ್ನು ಕೆಲವು ಪ್ರದೇಶಗಳಲ್ಲಿ ೯ ರೂಪಾಯಿಗಳಿಂದ ೩೦೦ ರೂ.ವರೆಗೆ ತೆರವು ಕೊಡುವ ಪದ್ಧತಿ ಉಂಟು. ಇವರಲ್ಲಿ ವರದಕ್ಷಿಣೆ ಪದ್ಧತಿಯಂತೂ ಇರುವುದಿಲ್ಲ. ಮದುವೆಗೆ ಹೆಣ್ಣು ಬೇಕೆನಿಸಿದಾಗ ಗಂಡಿನ ಕಡೆಯವರು ತಮ್ಮ ಸಂಬಂಧಿಕರೊಂದಿಗೆ ಹೆಣ್ಣಿನ ಮನೆಯ ಮುಂದೆ ಒಂದು ಚಾಪೆ ತಂದು ಹಾಕುತ್ತಾರೆ. ಚಾಪೆ ಹಾಕುವುದೆಂದರೆ ಹೆಣ್ಣನ್ನು ಕೇಳಲು ಬಂದಿದ್ದಾರೆ ಎಂದು ಸೂಚಿಸುವುದಾಗಿದೆ. ಚಾಪೆಯನ್ನು ಹಾಕುವಾಗ ಹೆಣ್ಣಿನ ಹಿರಿಯರ ಜೊತೆಗೆ ವಿಚಾರಿಸಿ ಹೆಣ್ಣನ್ನು ಕೊಡಲು ಒಪ್ಪಿಗೆ ಸೂಚಿಸಿದರೆ ಬಂಧುಬಾಂಧವರನ್ನು ಹಾಗೂ ಸಮುದಾಯದ ಹಿರಿಯರನ್ನು ಕರೆಯಿಸಿ ಅವರ ಸಮ್ಮುಖದಲ್ಲಿ ಎರಡು ಮನೆಯವರೂ ಪರಸ್ಪರ ಹೆಣ್ಣು ಗಂಡು ಒಪ್ಪಿಗೆಯಾಗಿದೆ ಎಂದು ತಿಳಿಸುತ್ತಾರೆ. ತರುವಾಯ ಬಂದು ನಿಶ್ಚಿತ ದಿನದಂದು ಗಂಡಿನ ಕಡೆಯವರು ನಿಶ್ಚಯ ಕಾರ್ಯಕ್ಕೆ ಬರುತ್ತಾರೆ. ಹಿರಿಯರೆಲ್ಲರೂ ಎರಡು ಮನೆತನದವರ ಒಪ್ಪಿಗೆಯನ್ನು ಕೇಳಿ ಈ ಎರಡು ಮನೆಯವರಿಗೂ ಹಿತನುಡಿಗಳನ್ನು ಹೇಳುತ್ತಾರೆ. ದೈವದ ಸಮ್ಮುಖದಲ್ಲಿ ಗಂಡಿನವರು ಎಲೆ ಅಡಿಕೆಗಳನ್ನು ಹಿರಿಯಗೆಲ್ಲರಿಗೂ ಹಂಚುತ್ತಾರೆ. ನಂತರ ಗಂಡಿನವರಿಂದ ೨೫ ರೂ.ಗಳನ್ನು ದೈವಕ್ಕೆ ಪಡೆದುಕೊಂಡು ಇದಕ್ಕೆ ದೈವಚಾರ ಅಥವಾ ಕುಲ ಇಳಿಮು ಎಂದು ಕರೆಯುತ್ತಾರೆ ಮದುವೆಯ ದಿನಾಂಕವನ್ನು ಗೊತ್ತುಪಡಿಸುತ್ತಾರೆ.

## ಮದುವೆಯ ಕ್ರಮ

ವಿವಾಹ ಸುಡುಗಾಡು ಸಿದ್ಧರ ಮದುವೆಗಳು ಹೆಚ್ಚಾಗಿ ದಸರಾ, ದಿಪಾವಳಿ ಹಬ್ಬಗಳ ಸಮಯದಲ್ಲಿ ನಡೆಯುತ್ತವೆ. ಇದಕ್ಕೆ ಕಾರಣ ಅಲೆಮಾರಿಗಳಾದ ಇವರು ವರ್ಷಕ್ಕೊಮ್ಮೆ ಒಂದೆಡೆ ಸೇರುವ ಪದ್ಧತಿ ಉಂಟು. ಅಂತಹ ಸಂದರ್ಭದಲ್ಲಿ ಇವರು ಮದುವೆ ಸಮಾರಂಭ ಗಳನ್ನು ಏರ್ಪಡಿಸುತ್ತಾರೆ. ಮದುವೆಯನ್ನು ಮಾಡುವಾಗ ಒಳ್ಳೆಯ ದಿನ ಮುಹೂರ್ತ ನೋಡುವ ಪದ್ಧತಿ ಇವರಲ್ಲಿಲ್ಲ. ಎಲ್ಲರೂ ಒಂದಡೆ ಸೇರುವುದೇ ಮುಖ್ಯವಾಗಿಸಿಕೊಡು ಅಂತಹ ಸಂದರ್ಭದಲ್ಲಿ ಮದುವೆಗಳನ್ನು ನಡೆಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆ ಮಾಡಲು ಮುಹೂರ್ತಗಳನ್ನು ನೋಡುತ್ತಿದ್ದಾರೆ. ಅಲ್ಲದೆ ಇವರು ಕೂಡ ಆಧುನಿಕತೆಯ ಪ್ರಭಾವದಿಂದಾಗಿ ಗುಡಿ, ಕಲ್ಯಾಣ ಮಂಟಪಗಳಲ್ಲಿ ಮದುವೆಗಳನ್ನು ಮಾಡಲು ಪ್ರಾರಂಭಿಸಿರುವರು. ಹಾಗೇ ಇತ್ತೀಚೆಗೆ ಸಮೂಹಿಕ ಮದುವೆಗಳಲ್ಲಿ ವಿವಾಹ

ಮಾಡುತ್ತಿರುವುದು ಕಂಡುಬರುತ್ತಿದೆ. ೫ ರಿಂದ ೧೦ ಕುಟುಂಬಗಳು ಕೂಡಿಕೊಂಡು ಒಂದೇ ಸ್ಥಳದಲ್ಲಿ ಹಾಗೂ ಒಂದೇ ಕಲ್ಯಾಣ ಮಂಟಪದಲ್ಲಿ ಅಥವಾ ಊರಿನ ಗುಡಿಗಳ ಮುಂದೆ ಹಂದರವನ್ನು ಹಾಕಿ ಸಾಮೂಹಿಕವಾಗಿ ಮದುವೆ ಮಾಡುತ್ತಾರೆ. ಮತ್ತು ಮದುವೆಯ ಎಲ್ಲಾ ರೀತಿಯ ಖರ್ಚುವೆಚ್ಚಗಳನ್ನು ಮದುವೆ ಮಾಡುವ ಎಲ್ಲ ಕುಟುಂಬಗಳು ಸಮನಾಗಿ ಹಂಚಿ ಕೊಳ್ಳುತ್ತಾರೆ.

ಇವರಲ್ಲಿ ಮದುವೆಗಳು ಮೊದಲು ೫ ದಿನಗಳವರೆಗೆ ನಡೆಯುತ್ತಿದ್ದವು. ಇದಕ್ಕೆ ಪೆದ್ದ ಪೆಂಡ್ಲು ಎಂದು ಕರೆಯುತ್ತಾರೆ. ಕ್ರಮೇಣ ಈ ಪದ್ಧತಿ ಇತ್ತೀಚಿಗೆ ಬದಲಾಗಿ ಒಂದು ದಿನದಲ್ಲಿ ಮದುವೆಯ ಎಲ್ಲಾ ಕಾರ್ಯಗಳನ್ನು ಮುಗಿಸಲಾಗುತ್ತದೆ. ಮದುವೆಯ ಕಾರ್ಯ ಗಂಡಿನ ಮನೆಯ ಮುಂದೆ ನಡೆಯುತ್ತದೆ. ಹೆಣ್ಣಿನ ಮನೆಯ ಮುಂಭಾಗದಲ್ಲಿ ಚಾಪೆ ಹಾಕುವುದರೊಂದಿಗೆ ಮದುವೆಯ ಕಾರ್ಯ ಪ್ರಾರಂಭವಾಗುವುದು. ಮದುವೆಯ ಕಾರ್ಯ ವನ್ನು ನಡೆಸಲು ಬ್ರಾಹ್ಮಣ ಪುರೋಹಿತನನ್ನು ನೇಮಿಸುವುದಿಲ್ಲ. ಅವರಲ್ಲಿಯೆ ಮದುವೆಯ ಎಲ್ಲ ನಿಯಮಗಳನ್ನು ಬಲ್ಲ ಹಿರಿಯರು ಪುರೋಹಿತರಾಗಿ ಕಾರ್ಯನಿರ್ವಹಿಸುತ್ತಾರೆ.

ಮದುವೆಯ ದಿನದಂದು ಮದುಮಕ್ಕಳನ್ನು ತಯಾರಿಸಿ ಇಬ್ಬರಿಗೂ ಅರಿಷಿಣವನ್ನು ಹಚ್ಚಿ ಹಸೆಮಣೆಯಲ್ಲಿ ಕೂರಿಸಿ ಬಿಸಿ ನೀರಿನ ಸ್ನಾನ ಮಾಡಿಸಲಾಗುತ್ತದೆ. ಕೆಂಪು ವಸ್ತ್ರದಲ್ಲಿ ಒಂದು ತೆಂಗಿನ ಕಾಯಿ ಕಟ್ಟಿ ಗಂಡಿನ ಕೈಯಲ್ಲಿ ಹಿಡಿದುಕೊಳ್ಳಲು ತಿಳಿಸುತ್ತಾರೆ. ಅಲ್ಲದೇ ಬರ್ಚಿ ಚಾಕು ಯನ್ನು ಕೈಯಲ್ಲಿ ಹಿಡಿದುಕೊಳ್ಳುವ ಪದ್ಧತಿ ಇರುತ್ತದೆ. ಬರ್ಚಿ ಅಥವಾ ಕತ್ತಿಗೆ ನಿಂಬೆಹಣ್ಣು ಚುಚ್ಚಿ ಇದನ್ನು ಮದುವೆ ಮುಗಿಯವರೆಗೆ ಗಂಡು ಹಿಡಿದುಕೊಳ್ಳಲು ತಿಳಿಸುತ್ತಾರೆ. ಕಲ್ಲಿನ ಲಿಂಗವನ್ನು ಮಾಡಿ ಪೂಜಿಸಿ ಬಲ ತೋಳಿಗೆ ಕಟ್ಟುತ್ತಾರೆ. ಹಂದರದಲ್ಲಿ ನಾಲ್ಕು ಬಿಂದಿಗೆಗಳನ್ನು ಚೌಕಾಕಾರವಾಗಿ ಇರಿಸಿ ಸುರಿಗೆ ಸುತ್ತುತ್ತಾರೆ. ಸುರುಗಿಯೊಳಗೆ ಮಧುಮಕ್ಕಳನ್ನು ಕೂರಿಸಿ ಸುರಿಗೆಯ ಮುಂದಿರಿಸಿದ ಬಿಂದಿಗೆಯ ನೀರಿನಿಂದ ಮದುಮಕ್ಕಳಿಗೆ ಸುರಿಗೆ ನೀರು ಹಾಕಲಾಗುತ್ತದೆ. ಸುರಿಗೆ ಬಿಂದಿಗೆಗಳಿಗೆ ಎಲೆ, ಅರಿಶಿಣ ಕೊಂಬು ಸೇರಿಸಿ ಕಂಕಣವನ್ನು ಕಟ್ಟುತ್ತಾರೆ. ತರುವಾಯ ಮಾಂಗಲ್ಯ ಮತ್ತು ತೆಂಗಿನ ಕಾಯಿಯನ್ನು ಮುತ್ತೈದೆಯರಿಂದ ಹಾಗೂ ಹಿರಿಯರ ಕೈಯಲ್ಲಿ ಮುಟ್ಟಿಸಿ ನಂತರ ತಾಳಿಯನ್ನು ಕಟ್ಟಿಸುತ್ತಾರೆ. ನಂತರ ಎಲ್ಲರೂ ಸೇರಿ ಊಟಮಾಡುತ್ತಾರೆ. ಮದುವೆಯ ಕಾರ್ಯ ಮುಗಿಯುವವರೆಗೆ ಸೇಂದಿ, ಸರಾಯಿಗಳ ಕುಡಿತದ ಖರ್ಚುಗಳನ್ನು ಗಂಡಿನವರೆ ನೋಡಿಕೊಳ್ಳಬೇಕು. ಹೆಣ್ಣಿನ ಕುಟುಂಬದವರು ಮದುವೆಯ ಯಾವ ಖರ್ಚುಗಳನ್ನು ವಹಿಸಿಕೊಳ್ಳುವುದಿಲ್ಲ.

ವೈವಾಹಿಕ ಸ್ಥಾನಮಾನ

ಸುಡುಗಾಡುಸಿದ್ಧರಲ್ಲಿ ವಿವಾಹಿತ ಪುರುಷರು ೨೭.೨೫ ಮತ್ತು ಸ್ತ್ರೀಯರು ೨೧.೮೪, ಅವಿವಾಹಿತರು ೪೯.೦೯ರಷ್ಟಿರುವವರು. ಒಟ್ಟು ಅವಿವಾಹಿತರಲ್ಲಿ ಪುರುಷರು ೨೭.೨೫ರಷ್ಟಿರು ವುದು ಆತಂಕದ ವಿಷಯವೇ ಸರಿ. ಇವರಲ್ಲಿ ವಿಧುರರಿಗಿಂತ ವಿಧವೆಯರ ಪ್ರಮಾಣವು ಅಧಿಕವಾಗಿರುವುದು ಕೋಷ್ಟಕ ೪.೨ .

**ಕೋಷ್ಟಕ ೪.೧ ಸಮೀಕ್ಷೆಗೊಳಪಟ್ಟ ಸುಡುಗಾಡುಸಿದ್ಧರ ವೈವಾಹಿಕ ಸ್ಥಾನಮಾನ**

| ಸಂ. | ವೈವಾಹಿಕ ಸ್ಥಾನಮಾನ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಅವಿವಾಹಿತ | ೨೬೨೫ | ೨೧೮೪ | ೪೮೦೯ |
| ೨ | ವಿವಾಹಿತ | ೧೯೯೫ | ೨೦೩೯ | ೪೦೩೪ |
| ೩ | ವಿಧುರ, ವಿಧವೆ | ೧೯ | ೯೯ | ೧೧೮ |
| ೪. | ಬೇರ್ಪಡೆಯಾದವರು | ೨೨ | ೪೦ | ೬೨ |
| | | ೪೬೬೧ | ೪೩೬೨ | ೯೦೨೩ |



## ೫

# ಆರಾಧನೆ ಆಚರಣೆ ನಂಬಿಕೆ

ಸುಡುಗಾಡುಸಿದ್ಧರ ಮೇಲೆ ಇತರ ಸಮುದಾಯಗಳ ಪ್ರಭಾವ ಉಂಟಾಗಿದೆ. ಅವರ ಮೂಲ ವೃತ್ತಿ ಭಿಕ್ಷಾಟನೆಯಾಗಿರುವುದರಿಂದ ಭಿಕ್ಷಾಟನೆಯ ಸಾಮಾನುಗಳಾದ ಜೋಳಿಗೆ, ಗಂಟೆ, ಶಂಖ, ನಪೀರಿಗಳನ್ನು ಪೂಜಿಸುತ್ತಾರೆ. ಸುಡುಗಾಡು ಸಿದ್ಧರ ಶಕ್ತಿ ದೇವತೆಗಳಾದ ಹುಲಿಗೆಮ್ಮ, ದುರುಗಮ್ಮ, ಗುಡ್ಡದ ದ್ಯಾಮವ್ವ, ಪೋಚಮ್ಮ ಈ ರೀತಿಯಾಗಿ ಹೆಣ್ಣು ದೇವತೆಗಳ ಆರಾಧಕರಾಗಿದ್ದಾರೆ. ಹಾಗೇ ಶಿವ, ರುದ್ರ, ವಿಷ್ಣು, ಬಸವಣ್ಣ, ಸಿದ್ಧರಾಮ, ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ತಾವು ವಾಸಿಸುವ ಗ್ರಾಮದ ದೇವತೆಗಳಿಗೂ ಪೂಜೆಯನ್ನು ಸಲ್ಲಿಸುತ್ತಾರೆ. ಇವರು ಸಂಚಾರಿಗಳಾಗಿರುವುದರಿಂದ ಮತ್ತು ಗುಡಾರ ಗುಡಿಸಲಿನಲ್ಲಿ ವಾಸಿಸುವುದರಿಂದ ದೇವರ ಮೂರ್ತಿಗಳನ್ನು ಜೋಳಿಗೆಯಲ್ಲಿರಿಸುತ್ತಾರೆ. ಆ ಜೋಳಿಗೆಯನ್ನು ಗುಡಿಸಲಿನ ಮೂಲೆಯಲ್ಲಿ ತೂಗು ಹಾಕಿ ಪೂಜಿಸುವರು. ಕೆಲವು ವಿದ್ವಾಂಸರು ಇವರಿಗೆ ಸ್ಮಶಾನವೇ ದೇವರು, ಸ್ಮಶಾನ ದೇವತೆಯನ್ನು ಸುಡುಗಾಡು ಸಿದ್ಧರು ಪೂಜಿಸುವರೆಂದು ಹೇಳಿದ್ದಾರೆ. ಆದರೆ ಇಂದು ಇದು ಎಲ್ಲೂ ಕಂಡು ಬಂದಿರುತ್ತಿಲ್ಲ.

ವರ್ಷಕ್ಕೊಮ್ಮೆ ಒಂದಡೆ ಸಮುದಾಯದ ಎಲ್ಲರೂ ಒಂದೆಡೆ ಸೇರಿ ಪ್ರತಿ ಮನೆಗೆ ಇಂತಿಷ್ಟೆಂದು ದೇವರ ಕಾಣಿಕೆಯನ್ನು ಸಂಗ್ರಹಿಸುತ್ತಾರೆ. ಆ ಹಣದಿಂದ ಎಲ್ಲರೂ ಕೂಡಿ ಬಯಲು ಪ್ರದೇಶಕ್ಕೆ ಹೋಗಿ ಸಕ್ಕರೆ ದೇವರು ಹಾಗೂ ದಡಾರಮ್ಮ ದೇವರುಗಳಿಗೆ ಪೂಜೆ ಸಲ್ಲಿಸುತ್ತಾರೆ. ದಸರಾ, ದೀಪವಾಳಿ ಸಂದರ್ಭದಲ್ಲಿ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಬೇರೆ ಸಮುದಾಯಗಳಲ್ಲಿ ಇರುವಂತೆ ಇವರು ಕೂಡ ಹಿರಿಯರ ಹೆಸರಿನಲ್ಲಿ ಹೊಸ ಬಟ್ಟೆಗಳನ್ನು ತಂದು ಪೂಜಿಸಿ, ಸಿಹಿ ಅಡುಗೆಯನ್ನು ಮಾಡಿ ಹಿರಿಯರಿಗೆ ನೈವೇದ್ಯ ಮಾಡುತ್ತಾರೆ. ಮದುವೆಯ ಮುನ್ನಾದಿನ ತಮ್ಮ ಮನೆದೇವರನ್ನು ಪೂಜಿಸಿ ದೇವತಾಕಾರ್ಯ ಮಾಡುತ್ತಾರೆ. ಆ ಸಮಯದಲ್ಲಿ ಒಂದೇ ಬೆಡಗಿನ ಮನೆತನದವರು ಅವರವರ ಮನೆಗಳಲ್ಲಿ ದೇವರ ಪೂಜೆ ಕಾರ್ಯಕ್ರಮಗಳನ್ನು ಮಾಡುವುದಿಲ್ಲ. ಸತ್ತವನ ಕೊನೆಯ ದಿನದ ಕಾರ್ಯಕ್ರಮ ಮುಗಿದ ನಂತರವೇ ಅವರವರ ಮನೆಗಳಲ್ಲಿ ದೇವರಿಗೆ ಪೂಜೆಯನ್ನು ಸಲ್ಲಿಸುತ್ತಾರೆ.

## ಸಂಪ್ರದಾಯಗಳು

**ಜನನ :** ಸುಡುಗಾಡು ಸಿದ್ಧರಲ್ಲಿ ಮಗುವಿನ ಜನನ ಸಂದರ್ಭವು ಅತಿ ಸಂತೋಷದ ಸಂಗತಿಯಾಗಿರುತ್ತದೆ. ಹುಟ್ಟುವ ಮಗು ಗಂಡಾಗಲಿ ಹೆಣ್ಣಾಗಲಿ ಸಮಾನವಾಗಿ ಕಾಣುತ್ತಾರೆ. ಅಲೆಮಾರಿಗಳಾದ ಸುಡುಗಾಡು ಸಿದ್ಧರು ಚೊಚ್ಚಿಲ ಹೆರಿಗೆಯನ್ನು ಗಂಡನ ಮನೆಯಲ್ಲಿ ಮಾಡಿಸುತ್ತಾರೆ. ಮಗುವು ಹುಟ್ಟಿದ ೫ ಇಲ್ಲವೇ ೯ ದಿನಗಳಲ್ಲಿ ಸೂತಕ ತೆಗೆಯುತ್ತಾರೆ. ಈ ಸಮಯದಲ್ಲಿ ಗಂಗೆ ಪೂಜೆ ಮಾಡುವರು. ಹುಟ್ಟಿದ ಮಗುವಿಗೆ ಕಾಯಿಲೆ ಶೀತ ಉಸಿರಾಟದ ತೊಂದರೆಯಾಗಬಾರದೆಂದು ಸೂಜಿ ಕಾಯಿಸಿ ಮಗುವಿನ ಎದೆಯ ಗುಂಡಿಗೆ, ಹೊಕ್ಕಳು ಪಕ್ಕೆಯ ಎಡ ಬಲ ಭಾಗಗಳಲ್ಲಿ ಬರೆ ಹಾಕುತ್ತಾರೆ. ಹೆರಿಗೆ ಎಷ್ಟು ತೊಂದರೆಯಾದರೂ ಸರಿಯೆ, ಇವರು ಆಸ್ಪತ್ರೆಗಳಿಗೆ ಹೋಗುವುದಿಲ್ಲ. ಹೆರಿಗೆ ಕಷ್ಟವೆನಿಸಿದಾಗ ಮೀಸಲು ನೀರು ತಂದು ಸೂಲಗಿತ್ತಿಯರ ಮುಖಾಂತರ ಗರ್ಭಿಣಿಗೆ ಕುಡಿಸುತ್ತಾರೆ. ಅಲ್ಲದೆ ಮುತ್ತೈದೆಯವರಿಂದ ಪೂಜಿಸಿದ ನೀರು ತಂದು ಕುಡಿಸುವರು. ಇದಕ್ಕೆ ಧರ್ಮದ ನೀರು ಎಂದು ಕರೆಯುವರು. ಇಷ್ಟಕ್ಕೂ ಹೆರಿಗೆಯಾಗದಿದ್ದರೆ ಕುದುರೆಯು ಎಂಜಲು ಮಾಡಿದ ಪದಾರ್ಥವನ್ನು ಗರ್ಭಿಣಿಗೆ ತಿನ್ನಲು ಕೊಡುವ ಪದ್ಧತಿ ಇರುತ್ತದೆ. ಇವೆಲ್ಲ ಪ್ರಯತ್ನಗಳಿಂದ ಹೆರಿಗೆಯಾಗದಿದ್ದಲ್ಲಿ ದೇವರ ಮೇಲೆ ಭಾರಹಾಕಿ ಕುಳಿತುಕೊಳ್ಳುತ್ತಾರೆ. ಮಗು ಜನಿಸಿದ ಮೂರು ದಿನಕ್ಕೆ ಶೆಟವಿ ಪೂಜೆ ಮಾಡಿದ ನಂತರ ರಾತ್ರಿ ಈರಲ ಪೂಜೆ ಮಾಡುತ್ತಾರೆ. ದೇವರಿಗೆ ಎಡೆಯನ್ನು ತೋರಿಸುತ್ತಾರೆ. ನಾಯಿಯು ಎಡೆಯನ್ನು ತಿನ್ನುವಾಗ ಕೋಲಿಂದ ಜೋರಾಗಿ ಹೊಡೆದು ಆ ಹೊಡೆತದಿಂದ ನಾಯಿ ಚೀರಿದಾಗ ಆ ಸಪ್ಪಳದಿಂದ ಹುಟ್ಟಿದ ಮಗುವಿನ ಇಂದ್ರಿಯಗಳನ್ನು ಪರೀಕ್ಷೆ ಮಾಡುತ್ತಾರೆ ಹಾಗೂ ಮಗುವಿನ ಪ್ರತಿಕ್ರಿಯೆಗಳು ಹೇಗಿವೆ ಎಂದು ಗಮನಿಸುತ್ತಾರೆ.

**ನಾಮಕರಣ :** ಮಗು ಹುಟ್ಟಿದ ಮೂರು ದಿನಕ್ಕೆ ಅಥವಾ ಹನ್ನೊಂದನೆಯ ದಿನಕ್ಕೆ ನಾಮಕರಣ ಮಾಡುವ ಪದ್ಧತಿ ಇರುತ್ತದೆ. ಮಗುವಿನ ಜನನ ನಕ್ಷತ್ರ, ದಿವಸ ಇತ್ಯಾದಿಗಳನ್ನು ಪುರೋಹಿತರಿಂದ ಕೇಳಿ ತಿಳಿದುಕೊಳ್ಳುವ ಪದ್ಧತಿ ಇವರಲ್ಲಿಲ್ಲ. ತೊಟ್ಟಿಲು ಪೂಜೆ ಮಾಡಿ ದೇವರ ಹೆಸರನ್ನಾಗಲಿ ಅಥವಾ ಅವರ ಮನೆಯ ಹಿರಿಯರ ಹೆಸರುಗಳನ್ನು ಪ್ರೀತಿಯಿಂದ ಕರೆಯುವುದುಂಟು. ಮಗುವಿಗೆ ಬಟ್ಟೆಯಿಂದ ತಯಾರಿಸಿದ ತೊಟ್ಟಿಲನ್ನು ಬಳಸುತ್ತಾರೆ. ಶಟವಿ ಪೂರಟಿ ಪೂಜೆಯ ನಂತರವೇ ಮಗುವಿಗೆ ನಾಮಕರಣ ಮಾಡುವುದು. ಮಗುವಿನ ನಾಮಕರಣದ ದಿನ ಪ್ರಾಣಿಗಳನ್ನು ಬೇಟೆಯಾಡಿ ದೈವದವರೆಲ್ಲಾ ಮಾಂಸವನ್ನು ಹಂಚಿಕೊಂಡು ತಿನ್ನುವ ಪದ್ಧತಿ ಇತ್ಯಾದಿ ಇತ್ತೀಚಿಗೆ ಈ ಸಂಪ್ರದಾಯ ಇವರಲ್ಲಿ ನಿಂತಿದೆ. ನಾಮಕರಣದ ದಿನ ತಾಯಿ, ಮಗುವಿಗೆ ತವರಿನವರು ಹೊಸಬಟ್ಟೆ ತರುತ್ತಾರೆ.

**ಋತುಮತಿ :** ಇವರಲ್ಲಿ ಹೆಣ್ಣು ಮಕ್ಕಳು ಋತುಮತಿಯಾದರೆ ಇತರರಂತೆ ೫ ದಿನ ಇಲ್ಲವೇ ೧೬ ದಿನಗಳವರೆಗೆ ಕೂಡಿಸುತ್ತಾರೆ. ಋತುಮತಿಯಾದ ವಿಷಯವನ್ನು ತಮ್ಮ ಬಂಧುಗಳಿಗೆ, ಊರಿನ ಹೆಂಗಸರಿಗೆ ತಿಳಿಸುತ್ತಾರೆ. ಹೆಣ್ಣಿನ ಮಾವನಾಗುವವನು ಬೇವಿನ ಸೊಪ್ಪಿನಿಂದ ಮನೆಯ ಹೊರಗೆ ಸಣ್ಣ ಗುಡಿಸಲನ್ನು ನಿರ್ಮಿಸುತ್ತಾನೆ. ಋತುಮತಿಯಾದವರು

ಪ್ರತ್ಯೇಕವಾದ ಆ ಸ್ಥಳದಲ್ಲಿಯೇ ಸೂತಕ ಕಳೆಯುವವರೆಗೆ ಇರಬೇಕಾಗುತ್ತದೆ. ಇಂತಹ ಸಮಯದಲ್ಲಿ ಸೊದರತ್ತೆಯಾದವಳು ಅವಳಿಗೆ ಸ್ನಾನ ಮಾಡಿಸುವಳು ಮತ್ತು ಅವಳ ಬಗ್ಗೆ ವಿಶೇಷ ಕಾಳಜಿ ವಹಿಸಿ ನೋಡಿಕೊಳ್ಳುತ್ತಾಳೆ. ೫ ದಿನ ಇಲ್ಲವೇ ೧೬ ದಿನದಂದು ಆ ಹೆಣ್ಣಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ಧರಿಸಲು ಹೇಳುತ್ತಾರೆ. ಇಂತಹ ಸಂದರ್ಭದಲ್ಲಿ ಅವಳಿಗೆ ತಿನ್ನಲು ಕೊಬ್ಬರಿ, ಬೆಲ್ಲ, ಕಡಲೆ, ಹಾಲು, ತುಪ್ಪ, ಮತ್ತು ಮಾಂಸದ ಊಟವನ್ನು ಕೊಡುತ್ತಾರೆ. ೫ ಅಥವಾ ೧೬ ದಿನಕ್ಕೆ ಮನೆಯನ್ನು ಸಾರಿಸಿ ಒಲೆಮುಟ್ಟು ಮಾಡಿಸುತ್ತಾರೆ. ಕೊನೆಯದಾಗಿ ತಮ್ಮ ಬಂಧುಬಳಗವನ್ನು ಕೂಡಿಸಿ ಸಿಹಿ ಊಟವನ್ನು ಮಾಡಿಸುತ್ತಾರೆ.

**ಮರಣ :** ಮರಣವು ಮಾನವನ ಜೀವನದ ಕೊನೆಯ ಹಂತವಾಗಿದೆ. ಮನುಷ್ಯನು ಹುಟ್ಟಿದಾಗ ಕೆಲವು ಆಚರಣೆಗಳನ್ನು ಮಾಡುವಂತೆ ಸಾವಿನ ನಂತರವೂ ಕೆಲವು ವಿಧಿ ವಿಧಾನಗಳನ್ನು ಮಾಡಬೇಕಾಗುತ್ತದೆ. ಸಾವಿನ ದವಡೆಯಲ್ಲಿರುವವರಿಗೆ ಹಾಲು ಅಥವಾ ನೀರನ್ನು ಬಾಯಿಯಲ್ಲಿ ಹಾಕುತ್ತಾರೆ. ಮರಣವನ್ನಪ್ಪಿದ ನಂತರ ಕಾಲು ಮಡಚಿ ಮಲಗಿಸುತ್ತಾರೆ, ಸಾವಿನ ಸುದ್ದಿಯನ್ನು ಬಂಧುಗಳಿಗೆ ಮುಟ್ಟಿಸುತ್ತಾರೆ. ನಂತರ ಬಿಸಿನೀರಿನಿಂದ ಹೆಣಕ್ಕೆ ಸ್ನಾನ ಮಾಡಿಸಿ ಬಟ್ಟೆಯನ್ನು ಹಾಕಿ ವಿಭೂತಿ, ರುದ್ರಾಕ್ಷಿ, ಕಾವಿ ಬಟ್ಟೆ ಮುಂತಾದವು ಗಳಿಂದ ಅಲಂಕರಿಸುತ್ತಾರೆ. ಶವವನ್ನು ಪೂರ್ವಕ್ಕೆ ಮುಖ ಮಾಡಿ ಕುಳ್ಳಿರಿಸುತ್ತಾರೆ. ಶವದ ಮುಂದೆ ಕಳಸವನ್ನಿಟ್ಟು ದೀಪ ಹಚ್ಚುವರು. ಆಮೇಲೆ ಬಂಧು ಬಳಗದವರು ಬಂದು ನಮಸ್ಕರಿ ಸುತ್ತಾರೆ. ಹೆಣವನ್ನು ಕೌದಿ ಇಲ್ಲವೆ ಬಟ್ಟೆಯಲ್ಲಿ ಸುತ್ತಿ ಉದ್ದವಾಗಿ ಕಟ್ಟಿದ ಬಿದುರಿನ ಚಟ್ಟದ ಮೇಲೆ ಕಟ್ಟಿ ಸ್ಮಶಾನಕ್ಕೆ ಒಯ್ಯುವರು.

ಶವವನ್ನು ಸ್ಮಶಾನಕ್ಕೆ ಒಯ್ಯುವ ಪೂರ್ವದಲ್ಲಿ ಹೊಸ ಮಣ್ಣಿನ ಮಡಕೆ ತಂದು ಅರಿಶಿಣ ಅಕ್ಕಿ ಹಾಕಿ ಸತ್ತಾತನ ಮನೆಯ ಮುಂದೆ ಹಾಕಿದ ಬೆಂಕಿಯಲ್ಲಿ ಅನ್ನ ತಯಾರಿಸುತ್ತಾರೆ. ಅನ್ನ ತಯಾರಿಸಿದ ಮಡಿಕೆಯನ್ನು (ಅನ್ನ ಮಡಿಕೆಯೊಳಗೆ ಇರುತ್ತದೆ) ಮರಣ ಹೊಂದಿದವನ ಹಿರಿಯ ಮಗನು ಹಿಡಿದುಕೊಂಡಿರುತ್ತಾನೆ. ಹಾಗೇ ಇನ್ನೊಂದು ಕೈಯಲ್ಲಿ ಕುಡುಗೋಲನ್ನು ಹಿಡಿದುಕೊಂಡು ಮುಂದೆ ಸಾಗುತ್ತಾನೆ. ಸ್ಮಶಾನ ಸಮೀಪಿಸಿದಂತೆ ನಿಯಮದ ಪ್ರಕಾರ ಇಳುವಿನ ಕಟ್ಟೆ ಅಥವಾ ದಿಂಪಡಕಲ್ಲಮ್ಮ ಎಂಬ ಸ್ಥಳದಲ್ಲಿ ಶವವನ್ನು ಇಳಿಸುತ್ತಾರೆ. ಹಿರಿಯ ಮಗನ ಕೈಯಲ್ಲಿದ್ದ ಅನ್ನದ ಮಡಿಕೆಯನ್ನು ಬೋರಲಾಗಿ ಹಾಕಿ ಎಡಗೈಯಲ್ಲಿರುವ ಕುಡಗೋಲಿನಿಂದ ಮಡಿಕೆಯನ್ನು ಪುಡಿಯಾಗುವಂತೆ ಒಡೆದು ಹಾಕುತ್ತಾನೆ. ಸತ್ತವರು ದೆವ್ವವಾಗಬಾರದೆಂಬ ಕಾರಣಕ್ಕಾಗಿ ಈ ಆಚರಣೆ ಮಾಡುತ್ತಾರಂತೆ

ಶವವನ್ನು ಉತ್ತರಕ್ಕೆ ಕಾಲು ಮಾಡಿ ದಕ್ಷಿಣಕ್ಕೆ ತಲೆಮಾಡಿ ಕುಣಿಯಲ್ಲಿಡುವರು. ನಂತರ ಹಣೆಗೆ ವಿಭೂತಿ ಹಚ್ಚಿ, ದೀಪ ಬೆಳಗಿ, ತೆಂಗಿನಕಾಯಿ ಒಡೆದು, ಧೂಪಗಳಿಂದ ಪೂಜಿಸುತ್ತಾರೆ. ಕೊನೆಯದಾಗಿ ಎಲ್ಲರು ಶವದ ಬಂಧುಗಳು ದರ್ಶನ ಪಡೆದು ಮಣ್ಣು ಹಾಕಿ ಮುಚ್ಚುತ್ತಾರೆ. ಕುಣಿಯ ಸಮೀಪ ಸತ್ತ ವ್ಯಕ್ತಿಯ ಹೆಂಡತಿಯ ಕೈಬಳಿ ಕಾಲುಂಗುರಗಳನ್ನು ತೆಗೆದು ಹಾಕುತ್ತಾರೆ. ನಂತರ ಅವಳ ಹಣೆಯ ಮೇಲಿನ ಕುಂಕುಮ ಅಳಿಸಿ ತಾಳಿ ತೆಗೆದುಬಿಡುತ್ತಾರೆ. ವ್ಯಕ್ತಿಯು

ಸಾವನಪ್ಪಿದ ಸ್ಥಳದಲ್ಲಿ ದೀಪದ ಹಣತೆಯನ್ನು ಹಚ್ಚಿ ಇಡುತ್ತಾರೆ. ಸಮುದಾಯದವರು ಬಂದು ನೀರು ತುಂಬಿದ ತಂಬಿಗೆಯಲ್ಲಿ ಪತ್ರಿ ಹಾಕಿ ದೀಪದ ದರ್ಶನ ಪಡೆದುಕೊಂಡು ಹೋಗುತ್ತಾರೆ. ಸೂರ್ಯೋದಯವಾಗುವವರೆಗೆ ದೀಪವನ್ನು ಶಾಂತವಾಗದಂತೆ ನೋಡಿ ಕೊಳ್ಳುತ್ತಾರೆ. ಹಾಗೆ ತಂಬಿಗೆ ನೀರು ಕಡಿಮೆ ಯಾದರೆ ಕೆಡಕು ಆಗುವ ಸಂಭವವಿರುತ್ತದೆ ಎಂಬ ಕಲ್ಪನೆ. ಮುಂಜಾನೆ ತಂಬಿಗೆಯ ನೀರನ್ನು ಹಸಿರು ಬುಡದ ಗಿಡಕ್ಕೆ ಹಾಕುತಾರೆ. ಗಿಡ ಬೆಳೆದಂತೆ ಅವರ ವಂಶವೂ ಬೆಳೆಯುತ್ತದೆ ಎಂಬ ಇವರ ನಂಬಿಕೆಯಾಗಿದೆ. ವಠಾರದ ಜನರು ೩ ದಿನಗಳವರೆಗೆ ಸತ್ತವರ ಮನೆಗೆ ಊಟವನ್ನು ತಂದು ಕೊಡುತ್ತಾರೆ. ಮೂರನೆಯ ದಿವಸ ದಂದು ಗುಡಿಸಲುಗಳನ್ನು ಸಾರಿಸಿ ಶುಚಿತ್ವಗೊಳಿಸಿ ಜೀವ ಬಿಟ್ಟ ಸ್ಥಳದಲ್ಲಿ ಒಂದು ಕೋಳಿಯನ್ನು ಬಲಿ ನೀಡುತ್ತಾರೆ. ಅನ್ನ ಮತ್ತು ಕೊಳಿಯ ಸಾರನ್ನು ಮತ್ತು ಸತ್ತ ವ್ಯಕ್ತಿಯ ಇಷ್ಟವಾದ ವಸ್ತುಗಳನ್ನು ತಂದು ಎಡೆಯಲ್ಲಿಟ್ಟುಕೊಂಡು ಬಂದು ಶವಸಂಸ್ಕಾರ ಮಾಡಿದ ಸ್ಥಳಕ್ಕೆ ತಂದು ತಲೆಯ ಭಾಗದ ಕಡೆ ಒಂದು ಚಿಕ್ಕ ಗುಂಡಿ ತೆಗೆದು ಇವುಗಳನ್ನು ಹಾಕಿ ಮಣ್ಣು ಮುಚ್ಚುತ್ತಾರೆ. ನಂತರ ಒಂದು ಹೊಸ ಮಡಕೆಯನ್ನು ಇಟ್ಟು ವಾಲಿಕಾರನಿಂದ ಅದಕ್ಕೆ ತೂತು ಹಾಕಿಸುತ್ತಾರೆ. ಮರಣದ ವ್ಯಕ್ತಿಯ ಇಷ್ಟವಾಗಿದ್ದ ಪಾನಿಯಾ ಮತ್ತು ತಿನ್ನುವ ದಿನಸಿ ಪದಾರ್ಥಗಳನ್ನು ಹೆಣದ ಕುಣಿಯ ಮೇಲೆ ಹಾಕಿ ಊದಿನಕಡ್ಡಿ ಹಚ್ಚಿ ಗಂಟೆ ಬಾರಿಸಿ ಪೂಜಿಸುವರು. ಎಡೆಯಲ್ಲಿ ಉಳಿದ ಅರ್ಧಭಾಗವನ್ನು ಹತ್ತಿರದ ಹಳಕ್ಕೆ ಹೋಗಿ ನೀರಿನಲ್ಲಿ ತಗ್ಗು ತೆಗೆದು ಅದರಲ್ಲಿಟ್ಟು ಪೂಜಿಸುವರು. ಹಾಗೆಯೇ ಹಳ್ಳದ ದಂಡೆಯಲ್ಲಿ ಮರಳಿನಿಂದ ಐದು ಲಿಂಗಗಳನ್ನು ಮಾಡಿ ವಿಭೂತಿ ಕುಂಕುಮ ಹಚ್ಚಿ ಲೋಬಾನ ಇಟ್ಟು ಧೂಪ ಹಾಕಿ ಲಿಂಗ ಪೂಜೆ ಮಾಡುತ್ತಾರೆ. ವಾಲಿಕಾರನು ಎಡಗೈ ಹೆಬ್ಬೆರಳಿನಿಂದ ಎಲ್ಲರಿಗೂ ವಿಭೂತಿ ಹಚ್ಚುತ್ತಾನೆ. ಈ ಕಾರ್ಯದಲ್ಲಿರುವ ಹಿರಿಯನೊಬ್ಬನ ಪಾದದ ಮೇಲೆ ಒಂದು ನಾಣ್ಯ ವಿಡುತ್ತಾರೆ. ಅದು ಕೆಳಗೆ ಬಿಳದಂತೆ ವಾಲಿಕಾರ ಹಣವನ್ನು ಎತ್ತಿಕೊಂಡು ಗಂಟೆ, ಶಂಕು ಬಾರಿಸುತ್ತಾನೆ. ನಂತರ ಅಲ್ಲಿಂದ ಸತ್ತವನ ಮನೆಗೆ ಬಂದು ಒಂದು ಕೋಳಿ ಬಲಿ ನೀಡಿ ಅದರಿಂದ ಸಾರು ಮಾಡಿ ಎಲ್ಲರಿಗೂ ಊಟ ಮಾಡಿಸುತ್ತಾರೆ. ಈ ಬಗೆಯ ಅಡುಗೆಯನ್ನು ಸತ್ತವನ ಮನೆಯ ಮುಂದುಗಡೆ ಬಯಲಿನಲ್ಲಿ ಮಾಡುತ್ತಾರೆ. ಈ ಕಾರ್ಯಕ್ಕೆ ಬಂದವರೆಲ್ಲರು ಊಟ ಮಾಡುತ್ತಾರೆ. ಇದಕ್ಕೆ 'ನೀರಬಾಲ' ಎಂದು ಕರೆಯುತ್ತಾರೆ. ತರುವಾಯ ಸರಾಯಿ ಅಂಗಡಿಗೆ ಹೋಗಿ ಮದ್ಯಪಾನ ಮಾಡುವರು ಮತ್ತು ಮೃತರ ಕುಟುಂಬದವರಿಗೆ ಕೊಟ್ಟಿ ಬಳಗದಲ್ಲಿ ಸೇರಿಸಿಕೊಳುತ್ತಾರೆ.

೯ನೆಯ ದಿನದಲ್ಲಿ ಮೃತನ ಮನೆಯನ್ನು ಸೇರಿಸಿ ಆ ದಿನ ಸಿಹಿ ನೈವೇದ್ಯ ಮಾಡಿ ಬಳಗ ದವರೆಲ್ಲರಿಗೂ ಸಿಹಿ ಊಟಮಾಡಿಸಿ ಕಳುಹಿಸುತ್ತಾರೆ. ಮೂರು ತಿಂಗಳಾದ ಮೇಲೆ ಅಥವಾ ಒಂದು ತಿಂಗಳು ತುಂಬುವುದರೊಳಗೆ ಸಾವನಪ್ಪಿದವನ ಹೆಸರಿನಲ್ಲಿ ಮೂರ್ತಿ ಮಾಡಿಸಿ ತಂದು ಮನೆಯನ್ನು ಸಾರಿಸಿ ಸ್ವಚ್ಛಗೊಳಿಸಿ ಹೊಸ ಬಟ್ಟೆಗಳನ್ನು ತಂದು ಸಾವನಪ್ಪಿದ್ದ ವ್ಯಕ್ತಿಯ ಹೆಸರಿನಲ್ಲಿ ಪೂಜಿಸುವರು. ತಮ್ಮ ಕುಲಬಾಂಧವರಿಗೆ ಈ ಕಾರ್ಯಕ್ಕೆ ಬರಲು ಹೇಳುತ್ತಾರೆ. ಕೆಲ ಜಾತಿಯವರೇ ಈ ಕಾರ್ಯಕ್ರಮದಲ್ಲಿ ಭಾಗಿಗಳಾಗುತ್ತಾರೆ.

## ಧಾರ್ಮಿಕ ವಿಧಿ ವಿಧಾನಗಳು, ದೇವರು ಧಾರ್ಮಿಕ ಕೇಂದ್ರಗಳು

ಸುಡುಗಾಡು ಸಿದ್ಧರಲ್ಲಿ ಶಕ್ತಿದೇವತೆಗಳಾದ ಹುಲಿಗೆಮ್ಮ, ದುರ್ಗಮ್ಮ, ದ್ಯಾಮಮ್ಮ, ಯಲ್ಲಮ್ಮ ಮುಂತಾದ ಹೆಣ್ಣು ದೇವತೆಗಳನ್ನು ಪೂಜಿಸುತ್ತಾ ಬಂದಿದ್ದಾರೆ. ಅದೇ ರೀತಿಯಾಗಿ ಈರಣ್ಣ ಬಸವಣ್ಣ, ವಿಠೋಬ, ಶಿವ, ಹನುಮಂತ, ದೇವರುಗಳನ್ನು ಸಹ ಪೂಜಿಸುತ್ತಾರೆ. ನಾಡಿನ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ ಜನರು ಆಯಾ ಗ್ರಾಮಗಳ ದೇವತೆಗಳನ್ನು ಪೂಜಿಸುತ್ತಾ ಬಂದಿರುತ್ತಾರೆ.

ವಾರದಲ್ಲಿ ಮಂಗಳವಾರ ಮತ್ತು ಶುಕ್ರವಾರವನ್ನು ಹೆಣ್ಣು ದೇವತೆಗಳ ವಾರವನ್ನು ಪೂಜಿಸುವರು. ಇವರು ಮಾಡುವ ಭಯಾನಕ ಪೂಜೆಗಳಿಂದ ದೇವರ ಮೇಲೆ ಅಪಾರವಾದ ನಂಬಿಕೆಯನ್ನಿಟ್ಟು ಕುರಿ, ಕೋಳಿ, ಬಲಿಕೊಡುವ ಪದ್ಧತಿ ಇವರಲ್ಲಿದೆ ಮತ್ತು ದೇವರ ಹೆಸರುಗಳ ಮೇಲೆ ತಮ್ಮ ಮನಸ್ಸಿನಲ್ಲಿರುವ ಇಚ್ಛೆಗಳು ಪೂರ್ಯಕೆಯಾಗುವುದರ ಸಲುವಾಗಿ (ಮುಡುಪು) ಧಾರ್ಮಿಕ ಉದ್ದೇಶಗಳಿಗಾಗಿ ಒಂದಿಷ್ಟು ಹಣವನ್ನು ಚಿಕ್ಕ ಚೀಲದಲ್ಲಿ ಹಾಕಿ ಮುಡುಪಾಗಿಡುತ್ತಾರೆ.

ಪ್ರತಿಯೊಂದು ಕುಟುಂಬಗಳಿಗೆ ಕುಲದೈವಗಳಿವೆ. ಅವುಗಳನ್ನು ಪೂಜಿಸುವ ಪರಂಪರೆ ಇಟ್ಟುಕೊಂಡು ಬಂದಿದ್ದಾರೆ. ಇವರು ದೇವರುಗಳ ಬಗ್ಗೆ ಅಪಾರವಾದ ನಂಬಿಕೆಯನ್ನು ಹೊಂದಿದ್ದಾರೆ. ಹೀಗಾಗಿ ದೇವರುಗಳ ಮೇಲೆ ಬೇರೆ ಬೇರೆ ರೀತಿಯಿಂದ ನಂಬಿಕೆಯಿಂದ ಪೂಜಿಸುವುದುಂಟು. ಈ ಜನರು ತಮ್ಮ ಕುಟುಂಬದ ಒಳ್ಳೆಯ ಕೆಲಸಗಳಾಗಬೇಕಾಗಿದ್ದರೆ ದೇವರ ಕೇಳುವುದು ದೇವರ ಕಲ್ಲು ಎತ್ತುವುದು ಮೈಯಲ್ಲಿ ದೇವರು ಬರುವದು ದೇವರ ಕಲ್ಲುಸುತ್ತುವುದು ಮುಂತಾದವುಗಳನ್ನು ಮಾಡುತ್ತಾರೆ. ದೇವರ ಹೇಳಿಕೆಯಲ್ಲಿ ಇವರಿಗೆ ನಂಬಿಕೆ ಇದೆ.

೧. ರುದ್ರಾಕ್ಷಿ ಹೇಳಿಕೆ (ಸಕಿನಮು) ೨. ಬಿಂದಿ ಹೇಳಿಕೆ (ಸಕಿನಮು) ೩. ದೇವರ ಮುಂದಿನ ಕಲ್ಲು ಎತ್ತುವುದು ದೇವತೆಗಳ ಗುಡಿಗಳಲ್ಲಿ ಹೂ ಕೇಳಲು ಹೋಗುವುದು ಇತ್ಯಾದಿಗಳಿಂದ ತಮ್ಮ ಶಕುನ ನೋಡಿಕೊಳ್ಳುತ್ತಾರೆ.

ಸುಡುಗಾಡು ಸಿದ್ಧರು ಆಂಧ್ರದ ಮೂಲದವರಾಗಿರುವುದರಿಂದ ಪರ್ವತ ಶ್ರೇಣಿಯಲ್ಲಿರುವ ಕರ್ನೂಲ ಜಿಲ್ಲೆಯಲ್ಲಿ ವ್ಯಾಪಕವಾಗಿ ನೆಲಸಿರುವುದರಿಂದ ಶೈವ ಮತಾವಲಂಬಿಗಳಾಗಿದ್ದಾರೆ. ಹಿಂದೆ ಇವರು ಗಿಡಮೂಲಿಕೆ ಔಷಧ ಮಾರಾಟ ಮಾಡಿ ಜೀವನ ಸಾಗಿಸುತ್ತಾ ಬಂದಿದ್ದಾರೆ. ಆಧುನಿಕತೆಯ ಒತ್ತಡಗಳಿಂದ ಗುಡ್ಡಗಾಡುಗಳನ್ನು ತ್ಯಜಿಸಿ ಕ್ರಮೇಣ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಿರುತ್ತಾರೆ. ಹೀಗಾಗಿ ಸುಡುಗಾಡು ಸಿದ್ಧರು ಆಂಧ್ರ ಪ್ರದೇಶದ ಹಲವು ಭಾಗಗಳಲ್ಲಿ ಮತ್ತು ಇನ್ನಿತರ ರಾಜ್ಯಗಳಾದ ಕರ್ನಾಟಕ ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳಲ್ಲಿ ನೆಲೆಸಿದ್ದಾರೆ.

ಸುಡುಗಾಡು ಸಿದ್ಧರು ಶ್ರೀಶೈಲ ಮಠಕ್ಕೆ ತಪ್ಪದೆ ತಮ್ಮ ಹರಕೆಗಳನ್ನು ತೀರಿಸುತ್ತಾರೆ. ಈ ಸಂದರ್ಭದಲ್ಲಿ ಹೋಗಲು ಆಗದವರು ಶ್ರೀಶೈಲಕ್ಕೆ ಹೋಗುವವರಿಗೆ ಕಾಣಿಕೆಗಳನ್ನು

ಕೊಡುವ ಪದ್ಧತಿ ಅವರಲ್ಲಿದೆ. ಇವರು ಶ್ರೀಶೈಲ ಪರ್ವತ ಶ್ರೇಣಿಗಳಲ್ಲಿ ತಿರುಗಾಡಿ ಗಿಡ ಮೂಲಿಕೆಗಳನ್ನು ಸಂಗ್ರಹಿಸಿ ಔಷಧ ತಯಾರಿಸಿ ಜನರಿಗೆ ಮಾರುತ್ತಾರೆ. ಕರ್ನಾಟಕದ ಹಲವು ಪ್ರದೇಶಗಳಿಂದ ಮಹಾರಾಷ್ಟ್ರಗಳಲ್ಲಿರುವ ಪಂಢರಾಪುರಕ್ಕೆ ನೂರಾರು ಭಕ್ತಾದಿಗಳು ದಿಂಡಿ ತೆಗೆದುಕೊಂಡು ಹೋಗುತ್ತಾರೆ. ಸುಡುಗಾಡು ಸಿದ್ದರು ಕೂಡಾ ಈ ಪ್ರಭಾವಕ್ಕೆ ಒಳಗಾಗಿ ಕಾಲು ನಡಿಗೆಯಿಂದ ಪಂಢರಾಪುರಕ್ಕೆ ಹೋಗುತ್ತಾರೆ. ಇಂತಹ ಸಂದರ್ಭದಲ್ಲಿ ತಮ್ಮ ಜೀವನದುದ್ದಕ್ಕೂ ಮಾಂಸವನ್ನು ಸೇವಿಸುವುದನ್ನು ತ್ಯಜಿಸುವರು. ಇನ್ನು ಇವರು ನೆಲೆಸುತ್ತಿರುವ ಪ್ರದೇಶಗಲ್ಲಿಯ ದೇವರುಗಳನ್ನು ಪೂಜಿಸುವುದುಂಟು. ಧಾರ್ಮಿಕ ಸ್ಥಳಗಳಾದ ಧರ್ಮಸ್ಥಳ, ಪಂಡರಪುರ, ತಿರುಪತಿ, ಶ್ರೀಶೈಲ ದೇವರ ದರ್ಶನಕ್ಕೂ ಇವರು ಹೋಗುವುದುಂಟು.

### ಶಕ್ತಿ ಆಚರಣೆ ಹಬ್ಬಗಳು

ಸುಡುಗಾಡು ಸಿದ್ಧರು ಚೌಡಿ ಭೂತಗಳಿಗೂ ನಡೆದುಕೊಳ್ಳುವರು. ಸಾಮಾನ್ಯವಾಗಿ ಶಕ್ತಿ ದೇವತೆಗಳನ್ನು ಪೂಜಿಸುತ್ತಾರೆ.

ನಾಡಿಗೆ ಬರಗಾಲ ಬಂದಾಗ ಊರಿಗೆ ಮಾರಕ ಪಿಡಗು, ಕಾಲರಾ, ಬರುವುದು ದುರುಗಮ್ಮನ ಕಾಟ ಎಂದು ನಂಬಿಕೆಯುಳ್ಳವರಾಗಿದ್ದಾರೆ. ಇಂತಹ ಸಮಯದಲ್ಲಿ ಹಳ್ಳಿಯ ಪ್ರಮುಖರು ಸೇರಿ ಊರಿನಲ್ಲಿರುವ ಸುಡುಗಾಡುಸಿದ್ದರನ್ನು ಕರೆಸಿಕೊಂಡು ಮೂರು ದಿನಗಳ ವರೆಗೆ ರಾತ್ರಿಯಿಡಿ ಶಾಂತಿ ಪೂಜೆ ಮಾಡಿಸುವರು. ಹೀಗೆ ಮಾಡುವುದರಿಂದ ದೇವತೆಗಳೆಲ್ಲ ಶಾಂತವಾಗಿ ಮೇಲೆ ತಿಳಿಸಿದ ಎಲ್ಲಾ ರೀತಿಯ ಪೀಡೆಗಳು ಮಾಯವಾಗಿ ಊರಿಗೆ ಒಳ್ಳೆಯ ದಾಗುವುದು ಎಂದು ತಿಳಿಯುತ್ತಾರೆ.

ಮಲ್ಲಡಚೌಡಿಗೆ ಪ್ರತಿ ಅವಮಾಸ್ಯೆ ದಿವಸ ಒಂದು ಕೋಳಿ, ಒಂಭತ್ತು ನಿಂಬೆಹಣ್ಣು, ತೆಂಗಿನಕಾಯಿ, ಹೂವು, ಹಣ್ಣುಗಳನ್ನು ಅರ್ಪಿಸಿ ಶಾಂತಿ ಮಾಡಿದಲ್ಲಿ ಎಲ್ಲ ಸಂಕಷ್ಟಗಳು ಪರಿಹಾರವಾಗುತ್ತವೆ ಎಂಬ ನಂಬಿಕೆ ಇವರಲ್ಲಿದೆ.

### ಹಿರಿಯರ ಪೂಜೆ

ವರ್ಷಕ್ಕೊಮ್ಮೆ ದಸರಾ ಹಬ್ಬದಲ್ಲಿ ಹಿರಿಯರ ಹಬ್ಬವನ್ನು ಆಚರಿಸುವರು. ಈ ಸಂದರ್ಭ ದಲ್ಲಿ ಘಟಸ್ಥಾಪನೆ ಮಾಡಿ ಹಿರಿಯರ ಇಷ್ಟಾರ್ಥ ಪದಾರ್ಥಗಳನ್ನು ತಂದು ಜೊತೆಗೆ ಹೊಸ ಬಟ್ಟೆಗಳನ್ನು ಏರಿಸಿ, ಬೆಳ್ಳಿ ರೂಪಗಳನ್ನು ಮಾಡಿಸಿ ಎಡೆಯಿಟ್ಟು ಪೂಜಿಸುತ್ತಾರೆ. ಇಲ್ಲವೆ ಕಾರ್ತಿಕ ಮಾಸದಲ್ಲಿ ವರ್ಷಕ್ಕೊಮ್ಮೆ ಸತ್ತವರ ದಿನಗಳನ್ನು ಆಚರಿಸುತ್ತಾರೆ.

### ಜನಪದ ವೈದ್ಯ

ಸುಡುಗಾಡುಸಿದ್ಧರು ಕಾಡಿನಿಂದ ನಾಡಿಗೆ ಬಂದವರಾಗಿರುವುದರಿಂದ ಗಿಡಮೂಲಿಕೆಗಳ ಬಗ್ಗೆ ತಿಳಿದುಕೊಂಡವರಾಗಿದ್ದು ನಿಸರ್ಗದ ಮಡಿಲಲ್ಲಿ ಬೆಳೆದ ನಾನಾ ಜಾತಿಯ ಗಿಡಮೂಲಿಕೆ ಗಳನ್ನು ನಿರ್ಧಿಷ್ಟ ಸಮಯದಲ್ಲಿ ಹೋಗಿ ಪೂಜಿಸಿ ಅವುಗಳನ್ನು ವಶೀಕರಣ ಮಾಡಿಕೊಂಡು

ಕತ್ತರಿಸಿ ತರುತ್ತಾರೆ. ವಿಶೇಷವಾಗಿ ಅಮವಾಸ್ಯೆ ಹುಣ್ಣಿಮೆ ದಿನಗಳಲ್ಲಿ ಗದಗ ಜಿಲ್ಲೆಯ ಕಪ್ಪತಗುಡ್ಡ, ಬಳ್ಳಾರಿ ಜಿಲ್ಲೆಯ ಕುಮಾರಸ್ವಾಮಿ ಗುಡ್ಡ ಹಾಗೂ ಮಲೆನಾಡು ತಪ್ಪಲು ಪ್ರದೇಶಗಳನ್ನು ತಿರುಗಾಡಿ ಗಿಡಮೂಲಿಕೆಗಳನ್ನು ಸಂಗ್ರಹಿಸಿಕೊಂಡು ಬರುತ್ತಾರೆ.

ಭಿಕ್ಷಾಟನೆಗೆ ಹೊರಡುವ ಸಮಯದಲ್ಲಿ ಔಷಧಿಗಳನ್ನು ತಮ್ಮ ಜೋಳಿಗೆಯಲ್ಲಿ ಇರಿಸಿಕೊಂಡು ಹೊರಡುತ್ತಾರೆ. ಔಷಧ ಗಿಡಮೂಲಿಕೆಗಳನ್ನು ಯಾರಾದರೂ ಜನರು ಕಾಯಿಲೆ ಬಂದ ಬಗ್ಗೆ ತಿಳಿಸಿದರೆ ಅವರ ನಾಡಿ ಹಿಡಿದು ನೋಡಿ ನಾಟಿ ಔಷಧ ಕೊಟ್ಟು ಗುಣ ಪಡಿಸುತ್ತಾರೆ. ಇದಕ್ಕೆ ಪ್ರತಿಯಾಗಿ ಜನರಿಂದ ದವಸ ಧಾನ್ಯ, ಹಣ, ಶ್ರೀಮಂತರಿಂದ ಹಣ, ಧಾನ್ಯಗಳ ಬದಲಾಗಿ ಕುರಿ, ಕೋಳಿಗಳನ್ನು ಮತ್ತು ಹಸುಗಳನ್ನು ತೆಗೆದುಕೊಳ್ಳುತ್ತಾರೆ. ಆಸ್ಪತ್ರೆಗಳನ್ನು ನೋಡದೆ ಇರುವ ಇವರು ಎಂತಹ ರೋಗ ರುಜಿನಗಳಿಗೂ ಔಷಧಗಳನ್ನು ಕೊಡುತ್ತಾರೆ. ಮಕ್ಕಳಿಗೆ ಕಾಯಿಲೆಯಾದರೆ ಕಾಲಧೂಳಿ ತೆಗೆಯುವುದು, ಕೆಂಡ ಹಾಕುವುದು ಕಂಚು ಮಾಡುವುದು, ಕರೆದಾರ ಕಟ್ಟುವುದು, ಮತ್ತು ಬಾಲಗ್ರಹ ಕಟ್ಟುವುದು ಮಾಡುತ್ತಾರೆ. ಹೀಗಾಗಿ ವೈದ್ಯ ವಿಧಾನ ಇವರ ಪ್ರಮುಖ ವೃತ್ತಿಯಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಇವರು ಗಂಡಮಲಗಿ, ವಜ್ರಮುಷ್ಟಿ, ಬಿಳೆ ಪಾಂಗಾರ, ಅಮರಾವತಿ ತೊಗಟೆ, ಹಿರೆಬೇವಿನ ಚಕ್ಕಿ, ಲವಂಗಚಕ್ಕಿ, ಗುಡವತ್ತಿಯ ತಪ್ಪಲು, ಕತ್ತಿಗರಿಯ ತೊಪ್ಪಲು, ಗರುಡ ಬೇವಿನ ತೊಪ್ಪಲು, ಗಜಗದ ಬೇರು, ಸೈಂದ್ರ ಲವಣ, ಗುಳೆದಕಾಯಿ, ನಂಜಿನಚಕ್ಕೆ, ಕರಡೆಬೇರು, ಈಶ್ವರಿಗಡ್ಡೆ, ನೆಲಬೇವು, ಇವೆಲ್ಲವುಗಳನ್ನು ಸಂಗ್ರಹಿಸಿ ತಮ್ಮ ಬಳಿ ಇಟ್ಟುಕೊಂಡಿರುತ್ತಾರೆ.

ವೈಧ್ಯವಿಧಾನ ಇವರು ವೈಧ್ಯ ಪದ್ಧತಿಯನ್ನು ತಮ್ಮ ಹಿರಿಯರು ಕಲಿಸಿದ ಒಂದು ಅನುಭವದ ವಿದ್ಯೆಯೆಂದು ಕಲಿತು ಅದೇ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಹೀಗಾಗಿ ಔಷಧ ಗಿಡಮೂಲಿಕೆಗಳನ್ನೇ ಬೇರೆ ಬೇರೆ ರೀತಿಯಿಂದ ಉಪಯೋಗಿಸುತ್ತಾರೆ.

೧. ಗಂಡಸರಿಗೆ ಬರುವ ರೋಗಕ್ಕೆ ಉಪಯೋಗಿಸುವ ಔಷಧ

೨. ಹೆಂಗಸರ ರೋಗಕ್ಕೆ ಉಪಯೋಗಿಸುವ ಔಷಧ

೩. ಮಕ್ಕಳ ಕಾಯಿಲೆಗಳಿಗೆ ಉಪಯೋಗಿಸುವ ಔಷಧ

೪. ಪ್ರಾಣಿ ಮತ್ತು ವಿಷಜಂತುಗಳು ಕಡಿದಾಗ ಉಪಯೋಗಿಸುವ ಔಷಧ

೫. ಸಾಕು ಪ್ರಾಣಿಗಳಾದ ಆಕಳ ಮತ್ತು ಎಮ್ಮೆ ಕರ ಪಶು ಪಕ್ಷಿಗಳ ರೋಗಕ್ಕೆ ಉಪ ಯೋಗಿಸುವ ಔಷಧ.

ಸುಡುಗಾಡು ಸಿದ್ದರು ಭೀಕ್ಷಾಟನೆಯ ಸಂದರ್ಭದಲ್ಲಿ ತಮ್ಮ ಜೋಳಿಗೆಯಲ್ಲಿ ಸದಾ ಗಿಡಮೂಲಿಕೆ ಔಷಧಿಗಳು ಮತ್ತು ಬಾಣಂತಿಯ ಹಸ್ತ ಪಾತಳ ಗರಡಿ, ಬಾಳಸಮುದ್ರಕಾಯಿ, ನಾಗಭೂತಾಳ, ರಕ್ತ ಭೂತಾಳ, ಅಡವಿ ತೆಂಗಿನಕಾಯಿ, ಮಯೂರ ಚಕ್ಕೆ, ಎಡಮುರಗಿಕಾಯಿ, ಬಲಮುರಗಿ ಕಾಯಿ, ಜಲಸ್ತಂಭ, ಗರಡುಸ್ತಂಭ, ವಾಯುಸ್ತಂಭ, ಅಕ್ಕಿಕಾಳು, ಬೆನ್ನತ್ತಿ ಬೆಕ್ಕಿನ ಹೆಜ್ಜೆ, ಈ ಮೊದಲಾದವುಗಳಿಂದ ಯಾವುದೇ ರೋಗಗಳನ್ನು ಗುಣಪಡಿಸುವ ಸಾಮರ್ಥ್ಯ ಇವರಲ್ಲಿದೆ. ಹೀಗಾಗಿ ಇವರು ನಾಟಿ ವೈಧ್ಯರಾಗಿ ಹೆಸರುವಾಸಿಯಾಗಿದ್ದಾರೆ. ರೋಗಗಳನ್ನು ಗುರುತಿಸಿ ಗಿಡಮೂಲಿಕೆಗಳನ್ನು ಕೊಡುವುದು ಕಾಮಲೆ, ಕಿವಿಸೋರುವಿಕೆ,

ಕಣ್ಣುಬೆನೆ, ಹಾವು, ಚೇಳು, ನಾಯಿ ಕಚ್ಚಿದರೆ ತಮ್ಮ ಸಿದ್ಧ ಔಷಧಿಯಿಂದ ಗುಣಪಡಿಸುತ್ತಾರೆ. ಚಿಕ್ಕಮಕ್ಕಳಿಗೆ ಕಾಮಾಲಿಯಾದರೆ ಔಡಲ ಮುಗಳನ್ನು ಬೆಲ್ಲದಲ್ಲಿ ಸೇರಿಸಿ ಚೆನ್ನಾಗಿ ಅರೆದು ಮಗುವಿಗೆ ಮೂರು ದಿನ ಕುಡಿಸುತ್ತಾರೆ. ಅಥವಾ ಕಳ್ಳಿಯ ಮೇಲೆ ಇರುವ ಅಂತರಗಂಗೆಯನ್ನು ತಂದು ಸೂಜಿಯಿಂದ ಪೋಣಿಸಿ ಕೊರಳಲ್ಲಿ ಹಾಕುತ್ತಾರೆ. ಜೊತೆಗೆ ಒಂದು ವಾರದವರೆಗೆ ಜೋಳದ ರೊಟ್ಟಿ ಬೆಲ್ಲವನ್ನು ತಿನಿಸಿ ಬಹುಬೇಗ ಕಾಮಾಲೆ ರೋಗವನ್ನು ಗುಣಪಡಿಸುತ್ತಾರೆ.

**ಕಣ್ಣು ಬೆನೆಗೆ** ಹುಣಸೆ ತಪ್ಪಲನ್ನು ಚೆನ್ನಾಗಿ ಅರೆದು ಕಣ್ಣಲ್ಲಿ ಮೂರು ದಿನಗಳವರೆಗೆ ಹಾಕುವರು.

**ಹಾವು ಕಚ್ಚಿದರೆ** ಈಶ್ವರಿ ಬೇರು, ಗಿಣಿಮೊತಿಯಗಡ್ಡೆ ಒಂದು ದಿನ ನೀರಿನಲ್ಲಿ ಬೇರೆಸಿ ಕುಡಿಸುವರು. ಇದು ಅಲ್ಲದೇ ಹಾವು ಕಡಿದ ತಕ್ಷಣ ಈ ಔಷಧ ಕೊಟ್ಟರೆ ವಿಷವೇರುವ ಸಂಭವ ಇರುವುದಿಲ್ಲ.

**ಚೇಳು ಕಚ್ಚಿದರೆ** ನಾರಿ ಬಳ್ಳಿ ತಪ್ಪಲನ್ನು ನೀರಿನಲ್ಲಿ ಬೆರೆಸಿ ಕಿವಿಯಲ್ಲಿ ಹಿಂಡುವರು. ಇಲ್ಲವೆ ಕಚ್ಚಿದ ಭಾಗಕ್ಕೆ ಹುಣಸೆ ಬೀಜವನ್ನು ಚೆನ್ನಾಗಿ ತೇಯ್ದು ಚೇಳು ಕಡಿದ ಭಾಗಕ್ಕೆ ಹಚ್ಚುವರು.

**ಕಿವಿ ಸೊರುವಿಕೆ** ನೀರುನಾಯಿ ತೊಗಲು, ಜಿಂಕೆತೊಗಲು, ಲಿಂಬೆ ರಸದಲ್ಲಿ ಸುಟ್ಟು ಇದ್ದಲಿ ಮಾಡಿ ಅದರ ರಸವನ್ನು ಮೂರು ದಿನಗಳವರೆಗೆ ತಪ್ಪದೇ ಕಿವಿಯಲ್ಲಿ ಹಿಂಡುವರು.

**ಮೂರ್ಚೆ ರೋಗ** ಈ ರೋಗಕ್ಕೆ ಸೊಂಡುರು ಭಸ್ಮ, ಹಸಿಶುಂಠಿ, ಮೇಣಸು, ಬೆಳ್ಳೂಳ್ಳಿಗಳನ್ನು ಸಮ ಪ್ರಮಾಣದಲ್ಲಿ ಬೆರೆಸಿ ಚೆನ್ನಾಗಿ ಅರೆದು ಅದರ ರಸವನ್ನು ಮೂಗಿನಲ್ಲಿ ಹಿಂಡುವರು. ಜೊತೆಗೆ ಸೈಂದ್ರಲವಣ, ಮೆಣಸು, ಜೀರಗಿ ಅರೆದು ಲಿಂಬೆರಸದಲ್ಲಿ ಬೆರೆಸಿ ಐದು ದಿನಗಳವರೆಗೆ ಕೊಡಿವರು.

**ಮೂಲವ್ಯಾದಿ** ಮಳಿ ಮೂಲವ್ಯಾದಿ, ರಕ್ತಮೂಲವ್ಯಾದಿಗಳಿಗೆ ಅನೇಕ ಬಗೆಯ ಔಷಧ ವನ್ನು ಸೂಚಿಸುತ್ತಾರೆ. ಇಂತಹ ನೂರಾರು ರೋಗಗಳನ್ನು ಗುರುತಿಸಿ ಬಗೆಬಗೆಯ ಗಿಡ ಮೂಲಿಕೆಗಳ ಔಷಧಗಳನ್ನು ಕೊಟ್ಟು ಗುಣಪಡಿಸುತ್ತಾರೆ.

## ಮಾಟಮಂತ್ರ

ಸುಡುಗಾಡುಸಿದ್ದರು ಭೀಕ್ಷಾಟನೆಯ ಜೊತೆಗೆ ತಾಳೆ ಗರಿಯಿಂದ ರಚಿಸಲ್ಪಟ್ಟ ಹೊತ್ತಿಗೆ ಯೊಂದಿಗೆ ಭಿಕ್ಷಾಟನೆಯ ಸಮಯದಲ್ಲಿ ಆ ಹೊತ್ತಿಗೆಗಳಲ್ಲಿ ಕಡ್ಡಿ ಹಾಕಿಸಿಕೊಂಡು ಜನರಿಗೆ ಭವಿಷ್ಯವನ್ನು ಹೇಳುತ್ತಾರೆ. ಆಸ್ತಿಗಳ ಬಗ್ಗೆ, ಸ್ತ್ರೀವಶೀಕರಣದ ಬಗ್ಗೆ ಮತ್ತು ಜನರಲ್ಲಿ ತಮಗಾಗದವರ ಬಗ್ಗೆ ತಂತ್ರ ಮಂತ್ರಗಳನ್ನು ಕಟ್ಟುವ ಮಾಂತ್ರಿಕ ವಿದ್ಯೆಯನ್ನು ಕಲಿತಿರುತ್ತಾರೆ.

## ಜನಪದ ನಂಬಿಕೆಗಳು

ಇವರಲ್ಲಿ ಧರ್ಮ, ಅಧರ್ಮ, ಪಾಪಪುಣ್ಯ, ಸ್ವರ್ಗ, ನರಕ,ಪುನರಜನ್ಮ ಇವುಗಳ ಬಗ್ಗೆ ಬಲವಾದ ನಂಬಿಕೆಗಳು ಇರುತ್ತವೆ. ಮನುಷ್ಯ ಸತ್ತ ತರುವಾಯ ಅವನು ಭೂತವಾಗುತ್ತಾನೆ. ಮನುಷ್ಯನಾದಿಯಾಗಿ ಸಕಲ ಜೀವಿಗಳೂ ಪುನರ್ಜನ್ಮಗೊಳ್ಳುತ್ತವೆ ಎಂದು ನಂಬುತ್ತಾರೆ.

ಸುಡುಗಾಡು ಸಿದ್ಧರು ಭಿಕ್ಷಾಟನೆಗೆ ಹೊರಟಾಗ ಒಂಟಿ ಬ್ರಾಹ್ಮಣ ಎದುರಾದರೆ ತಮಗೆ ಭಿಕ್ಷೆ ಸಿಗದು ಎಂದು ಹೇಳುತ್ತಾರೆ. ಹಾಗೆಯೇ ಮಂಡೆ ಬೋಳಿಸಿದ ಬ್ರಾಹ್ಮಣ ವಿಧವೆ ಎದುರಾದರೆ ತಮಗಾವುದೋ ಅನಿಷ್ಟಕಾದಿದೆ ಎಂದು ಭಾವಿಸುತ್ತಾರೆ.

ಕರಿಬೆಕ್ಕು ತಮ್ಮ ಬಲಭಾಗದಿಂದ ಎಡಭಾಗಕ್ಕೆ ಚಲಿಸಿದರೆ ಕೆಡಕುಂಟಾಗುತ್ತದೆ ಎನ್ನುವ ನಂಬಿಕೆ ಇದೆ.

ಯಾರಾದರೂ ಒಂಟಿ ಸೀನು ಸೀನಿದರೆ ಅನಿಷ್ಟವೆಂದು ಭಾವಿಸುತ್ತಾರೆ.

ನಾಯಿಗಳು ಒಂದೇ ಸಮನೆ ಊಳಿಟ್ಟರೆ ತಮಗೆ ಉಳಿಗಾಲವಿಲ್ಲ. ಏನಾದರೂ ಕೆಡುಕುವುಂಟಾಗುತ್ತದೆ ಎಂದು ತಿಳಿಯುತ್ತಾರೆ.

ತಲೆ ಮೇಲಿಂದ ಕಾಗೆ ಹಾರಿ ಹೋದರೆ ಒಳ್ಳೆಯದಾಗುವುದಿಲ್ಲ.

ಹಾವು ತಮ್ಮ ಬಲಭಾಗಕ್ಕೆ ಹರಿದು ಹೋದರೆ ಒಳಿತಾಗುತ್ತದೆ. ಇಂತಹ ಹಲವಾರು ನಂಬಿಕೆಗಳನ್ನು ಆ ಸಮುದಾಯವು ಹೊಂದಿದೆ.



# ೭

# ಒಳಾಡಳಿತ ವ್ಯವಸ್ಥೆ

ಅಲೆಮಾರಿಗಳು ತಮ್ಮದೇ ಆದ ಒಳಾಡಳಿತ ವ್ಯವಸ್ಥೆಯನ್ನು ಹೊಂದಿರುತ್ತಾರೆ. ತಮ್ಮ ಸಮುದಾಯದಲ್ಲಿ ನಡೆಯುವ ಅಂತರಿಕ ವ್ಯವಹಾರಗಳನ್ನು ತಮ್ಮ ತಮ್ಮಲ್ಲಿಯೇ ಬಗೆಹರಿಸಿ ಕೊಳ್ಳಲು ಬೇರೆಯವರಿಗೆ ಬಿಟ್ಟು ಕೊಡುವುದಿಲ್ಲ. ಪ್ರತಿಯೊಬ್ಬರು ಸಮುದಾಯದ ರೀತಿ-ನೀತಿ, ನಿಯಮಗಳನ್ನು ಪಾಲಿಸಿಕೊಂಡು ಹೋಗುವಂತರಾಗಿರುವರು. ಕುಟುಂಬದಲ್ಲಿ ತಮಗೆ ಎಷ್ಟೇ ತೊಂದರೆ ಇದ್ದರು ಸಮಾಜದ ಆಂತರಿಕ ವ್ಯವಸ್ಥೆ ಅಲ್ಲಿರುವ ಕಟ್ಟುಪಾಡುಗಳನ್ನು ಅತ್ಯಂತ ಪ್ರಾಮಾಣಿಕವಾಗಿ ಪಾಲಿಸಿಕೊಂಡು ಬಂದಿರುತ್ತಾರೆ. ಸಮುದಾಯವನ್ನು ಅತ್ಯಂತ ಗೌರವದಿಂದ ಕಾಣುತ್ತಾರೆ. ಹೀಗೆ ಸಿದ್ಧರು ತಮ್ಮ ಆಡುಭಾಷೆಯಾದ ತೆಲುಗಿನಲ್ಲಿ ಪದೇ ಪದೆ ಈ ವಾಕ್ಯವನ್ನು ಬಳಸುವುದುಂಟು. “ಕುಲಂ ಇಡಿಸಿನ ಕೋತಿಲೇದು ವನಂ ಇಡಿಸಿನ ಪಕ್ಷಿಲೇದು”, ಮಂಗಗಳು ತಮ್ಮ ಗುಂಪಿನಿಂದ ಕೂಡಿಕೊಂಡೇ ಇರುತ್ತವೆ ಎಂದಿಗೂ ಬೇರೆಯಾಗಿ ಇರಲಾರವು ಮತ್ತು ವನದಲ್ಲಿ ಪಕ್ಷಿಗಳು ಕೂಡಿ ಇರುವುದು. ಹಾಗೆ ಈ ಸಮುದಾಯದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಯು ಸಮುದಾಯದಲ್ಲಿಯ ಅನ್ಯಾಯ, ಅವ್ಯವಹಾರ, ಅತ್ಯಾಚಾರ ನಡೆಯದಂತೆ ಕಾಳಜಿವಹಿಸುತ್ತಾರೆ. ಇವರಿಗೆ ಪ್ರಾಣಕ್ಕಿಂತ ಮಾನವೆ ಹೆಚ್ಚು ಮುಖ್ಯ. ಸಮುದಾಯದ ನಿಯಮಗಳನ್ನು ಉಲ್ಲಂಘಿಸಿದವರ ಮೇಲೆ ಉಗ್ರಕ್ರಮ ಕೈಕೊಳ್ಳುವುದರ ಮೂಲಕ ಜನ ಜಾಗ್ರತೆಯನ್ನುಂಟು ಮಾಡುತ್ತಾರೆ. ಕುಲದ ನಿಯಮಗಳಿಗೆ ಎದುರಾದವರನ್ನು ಕುಲದಿಂದ ಬಹಿಷ್ಕಾರಿಸುವ ಕಠಿಣ ಶಿಕ್ಷೆಗಳು ಇವರಲ್ಲಿದೆ. ಹೀಗಾಗಿ ಇವರಲ್ಲಿ ಸಮುದಾಯಕ್ಕೆ ತಲೆಬಾಗಿ ನಡೆಯುವುದರಿಂದ ಇವರ ಒಳಾಡಳಿತ ವ್ಯವಸ್ಥೆ ಉಳಿದು ಬಂದಿದೆ. ಇವರು ಕುಲಪಂಚಾಯತಿಯ ವಿಧಿ-ವಿಧಾನಗಳನ್ನು ಚಾಚುತಪ್ಪದೆ ಅನುಸರಿಸಿ ಕೊಂಡು ಬಂದಿರುವರು. ದೈವದ ನಿರ್ಣಯ ದೇವರ ನಿರ್ಣಯವೆಂದೆ ಭಾವಿಸಿ ಪ್ರತಿಯೊಬ್ಬರು ದೈವದೊಳಗಿರುವ ಹಿರಿಯರು ಹೇಳಿದಂತೆ ನಡೆದುಕೊಳ್ಳುವರು. ತಮ್ಮ ಆಚಾರ-ವಿಚಾರ, ಹಿಂದಿನ ಆಗು-ಹೋಗುಗಳ ಬಗ್ಗೆ ಮುಂದಿನ ಆಗು-ಹೋಗುಗಳ ಬಗ್ಗೆ ಚಿಂತಿಸುವರು. ಯಾವ ಕಾರಣಕ್ಕೂ ತಮ್ಮಿಂದ ತಪ್ಪು ಆಗದಂತೆ ನೋಡಿಕೊಳ್ಳುತ್ತಾರೆ.

ಸುಡುಗಾಡು ಸಿದ್ದರು ಸಾಮಾನ್ಯವಾಗಿ ಸಣ್ಣಪುಟ್ಟ ವ್ಯವಹಾರಗಳನ್ನು ತಮ್ಮ ಹಟ್ಟಿಯಲ್ಲಿಯೇ ಬಗೆಹರಿಸಿಕೊಳ್ಳುವರು. ಜಟಿಲವಾದ ವಾಜ್ಯಗಳನ್ನು ಕಟ್ಟೆಯ ಮನೆಯ ನ್ಯಾಯಧೀಶರಲ್ಲಿ ನಡೆಯುವವು. ಇಂಥ ನ್ಯಾಯ ತೀರ್ಮಾನಗಳಿಗಾಗಿ ಪ್ರಾದೇಶಿಕ ಕಟ್ಟೆಮನೆಗಳನ್ನು ಮಾಡಿಕೊಂಡಿರುತ್ತಾರೆ. ಕರ್ನಾಟಕದಲ್ಲಿ ಪ್ರಮುಖವಾಗಿ ಹರಪನಹಳ್ಳಿ ಕಟ್ಟೆ, ಗೋಲಕಂಡ ಕಟ್ಟೆ, ಗದ್ವಾಲ ಕಟ್ಟೆಗಳಲ್ಲಿ ನ್ಯಾಯ ತೀರ್ಮಾನಗಳನ್ನು ಮಾಡುತ್ತಾರೆ. ಯಾವುದೇ ನ್ಯಾಯಕ್ಕಾಗಿ ಈ ಕಟ್ಟೆಮನೆಗಳಿಗೆ ಹೋಗುತ್ತಾರೆಯೇ ಹೊರತು ಕೋರ್ಟ, ಕಛೇರಿಗಳಿಗೆ ಹೋಗಲಾರರು. ಈ ಕಟ್ಟೆಮನೆಗಳ ತೀರ್ಮಾನವೇ ಹೈಕೋರ್ಟ್, ಸುಪ್ರಿಮ್‌ಕೋರ್ಟ್ ತೀರ್ಮಾನವಿದ್ದಂತೆ. ಇವುಗಳನ್ನು ಬಿಟ್ಟು ಬೇರೆ ಕಡೆಗೆ ನ್ಯಾಯ ಕೇಳಲು ಹೋದಲ್ಲಿ ಅಂಥವರನ್ನು ಕುಲದಿಂದ ಬಹಿಷ್ಕರಿಸಲಾಗುವ ಶಿಕ್ಷೆ ಇರುತ್ತದೆ.

**ನ್ಯಾಯ ಪಂಚಾಯತಿ ರಚನೆ**

ನ್ಯಾಯ ಪೀಠದಲ್ಲಿ ಸಮುದಾಯದ ಯಜಮಾನರು ಅಂದರೆ ಪ್ರತಿಯೊಂದು ಕುಟುಂಬದ ವ್ಯಕ್ತಿಯು ನ್ಯಾಯದ ಕಟ್ಟೆಯ ಸದಸ್ಯನಾಗಿರುತ್ತಾನೆ. ಪ್ರಾದೇಶಿಕವಾಗಿ ಪ್ರಸಿದ್ಧಿ ಪಡೆದ ನ್ಯಾಯ ಕಟ್ಟೆಗಳಾದ ಕೊಪ್ಪಳ ಜಿಲ್ಲೆಯ ಕನಕಪುರ, ಕಲಿಕೇರಿ, ಬುಡಶೆಟ್ಟಿನಾಳ ಹಾಗೂ ಬಾಗಲಕೋಟೆ ಜಿಲ್ಲೆಯ ಚಂದ್ರಗಿರಿ ಆಲಮಟ್ಟಿ ಡ್ಯಾಂ ಹಾಗೂ ಹರಪನಹಳ್ಳಿಯ ಹಂಪಾಪಟ್ಟಣ, ಹಗರಿಬೊಮ್ಮನಹಳ್ಳಿಯ ಚಾವಳ್ಳಿ ಗಿಣಿವಾಲ, ಕುದರೆಮೋತಿ ಇತ್ಯಾದಿ ನ್ಯಾಯಕೊಡುವ ಕಟ್ಟಮನೆ ಸ್ಥಳಗಳಾಗಿವೆ. ಆಯಾ ಪ್ರದೇಶದ ಹಿರಿಯರು, ಉದಾಹರಣೆಗೆ ಸಣ್ಣ ಸಾರೆಪ್ಪ ಭರಮಪ್ಪ ಗಂಟಿ, ನಾಗಪ್ಪಶಾಸ್ತ್ರೀ ರಾಚೋಟಿ, ಸಾಬಣ್ಣ ಕಿನ್ನೂರಿ, ಚಂದ್ರಪ್ಪ ಒಂಟೆತ್ತಿನವರ, ಬಾಬಯ್ಯ ಪರಿಯವರು, ಧರ್ಮಣ್ಣ ವಿಭೂತಿ, ಧರ್ಮಪ್ಪ ಮದ್ದಿ, ಸಾರೆಪ್ಪ ಕಿನ್ನೂರ ಮುಂತಾದ ವ್ಯಕ್ತಿಗಳು ನ್ಯಾಯಧೀಶ ಸ್ಥಾನದಲ್ಲಿ ಈ ಹಿಂದೆ ಇರುತ್ತಿದ್ದರು. ಇವರ ಸಮ್ಮುಖದಲ್ಲಿ ನ್ಯಾಯ ನಿರ್ಣಯಗಳು ಜರುಗುತ್ತಿದ್ದವು. ಇವರೆಲ್ಲರು ಪ್ರತಿಯೊಂದು ಊರಿನ ನ್ಯಾಯ ಕಟ್ಟೆಯ ಸ್ಥಾನದಲ್ಲಿದ್ದು ನ್ಯಾಯವನ್ನು ನೀಡುತ್ತಾ ಬಂದಿದ್ದಾರೆ. ನ್ಯಾಯ ನಡೆಯುವ ಸಮಯದಲ್ಲಿ ಅಡ್ಡಿ ಅಂತಕಗಳು ಬಾರದ ಹಾಗೆ ನೋಡಿಕೊಳ್ಳುತ್ತಿದ್ದರು ಮತ್ತು ತಮ್ಮ ವೈಯಕ್ತಿಕ ಕೆಲಸಗಳನ್ನು ಬದಿಗೊತ್ತಿ ಸಮುದಾಯದ ಹಿತದೃಷ್ಟಿಯಿಂದ ನ್ಯಾಯ ಪಂಚಾಯತಿಯಲ್ಲಿ ಭಾಗವಹಿಸುತ್ತಿದ್ದರು.

ಸಂಚಾರಿಗಳಾಗಿರುವುದರಿಂದ ಇವರು ವರ್ಷದಲ್ಲಿ ಒಮ್ಮೆ ದಸರಾ, ದೀಪವಾಳಿ ಸಂದರ್ಭದಲ್ಲಿ ಅಥವಾ ಜಾತ್ರೆ ಹಬ್ಬದ ದಿನಗಳನ್ನು ಗುರುತಿಸಿಕೊಂಡು ನ್ಯಾಯ ಕಟ್ಟೆಯ ಊರುಗಳಲ್ಲಿ ನ್ಯಾಯಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ವರ್ಷದುದ್ದಕ್ಕೂ ತಮ್ಮಲ್ಲಿ ನಡೆದ ಚಿಕ್ಕಪುಟ್ಟ ವ್ಯಾಜ್ಯಗಳು, ಜಗಳ, ಕಳ್ಳತನ ಕೊಲೆ, ಹಾದರ, ಎಂತಹ ಸಮಸ್ಯೆಗಳು ಇದ್ದರು ನ್ಯಾಯ ಪಂಚಾಯತಿಯ ಸಮ್ಮುಖದಲ್ಲಿಯೇ ಬಗೆಹರಿಸಿಕೊಳ್ಳುತ್ತಿದ್ದರು. ಕುಲಪಂಚಾಯತಿ ನ್ಯಾಯದ ಸ್ಥಳಗಳು ಬಟ್ಟಬಯಲಾಗಲಿ, ಗಿಡ ಮರಗಳ ನೆರಳಲ್ಲಾಗಲಿ ಗುಡಿ ಗುಂಡಾರಗಳಲ್ಲಿ ನಡೆಸುತ್ತಾರೆ. ಇದಕ್ಕೆ ಯಾವುದೇ ಸಮುದಾಯದ ಅಥವಾ ಸರ್ಕಾರದ ಅನುದಾನದ ಅವಶ್ಯಕತೆ

ಬೇಕಿರುವುದಿಲ್ಲ. ಅಧಿಕಾರಗಳ ಮರ್ಜಿಗೆ ಕಾಯಬೇಕಾದ ಅವಶ್ಯಕತೆ ಇಲ್ಲ. ಇಲ್ಲಿ ಸೇರಿರುವರೆಲ್ಲರೂ ಸಮಾನರು. ಏನೆ ಇದ್ದರು ಒಮ್ಮತದ ನಿರ್ಧಾರ ಇವರ ಸಮ್ಮುಖದಲ್ಲಿ ನಡೆಯುವ ಬಹುತೇಕ ನ್ಯಾಯಗಳು ತಮ್ಮ ಕುಲಬಾಂಧವರಲ್ಲಿಯೇ ತಿರ್ಮಾನವಾಗುತ್ತವೆ. ನ್ಯಾಯ ಕಟ್ಟೆಯ ನಿಯಮದಂತೆ ವಾದಿ ಮತ್ತು ಪ್ರತಿವಾದಿ ಪಂಚಾಯತಿಯ ನಿಯಮಗಳನ್ನು ಚಾಚುತಪ್ಪದೇ ನಡೆದುಕೊಳ್ಳಬೇಕು. ಕುಲ ಪಂಚಾಯತಿಯ ಮುಖ್ಯಸ್ಥರು ಈ ಜನರಿಗೆ ಯಾವುದೇ ತರಹದ ಅನ್ಯಾಯ ಅವ್ಯವಹಾರಗಳು ಆಗದಂತೆ ಎಚ್ಚರವಹಿಸುತ್ತಾರೆ. ನ್ಯಾಯ ಪಂಚಾಯಿತಿಯಲ್ಲಿ ವಿಧಿಸುವ ದಂಡ, ಕೊಡುವ ಶಿಕ್ಷೆಗೆ ಅಪರಾಧಿಗಳು ತಲೆಬಾಗಲೇಬೇಕು. ಪಂಚರ ತಿರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

**ಪಂಚಾಯತಿಯ ಕಾರ್ಯಗಳು**

ನ್ಯಾಯ ಬಯಸಿ ಬಂದವರು ಕುಲಪಂಚರ ಬಳಿ ತನಗೆ ಆದ ತೊಂದರೆಗಳನ್ನು ತಿಳಿಸುತ್ತಾರೆ. ನ್ಯಾಯ ನೀಡುವ ದೈವದವರು ವಾದಿ ಪ್ರತಿವಾದಿಗಳ ಸಮಸ್ಯೆಗಳನ್ನು ಸವಿಸ್ತಾರವಾಗಿ ತಿಳಿದುಕೊಂಡು ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಹಾಗೂ ನ್ಯಾಯ ದೊರಕಿಸಿ ಕೊಡಲು ಗಡವು ಅಥವಾ ದಿನಗಳನ್ನು ಗೊತ್ತು ಮಾಡುತ್ತಾರೆ. ನ್ಯಾಯ ಕಟ್ಟೆಗೆ ಸೇರುವ ಮುನ್ನಾದಿನವೇ ಎಲ್ಲ ಊರುಗಳಿಗೆ ಜನರು ಬರಲು ಒಬ್ಬ ಜೋಡಿದಾರನನ್ನು ಕಳಿಸಿ ಕೊಡುತ್ತಾರೆ(ಆತನಿಗೆ 'ಮಹಾಂತ'ನೆಂದು ಕರೆಯುವರು). ಗೊತ್ತು ಮಾಡಿದ ದಿನದಂದು ಸಮುದಾಯದವರು ಹಾಗೂ ಕುಲಪಂಚಾಯಿತಿಯ ನ್ಯಾಯ ನಿರ್ಣಾಯಕರು ಬಂದು ಸೇರಿ ನ್ಯಾಯ ಬಯಸಿ ಬಂದವರಿಂದ ಅಹವಾಲುಗಳನ್ನು ಆಲಿಸುತ್ತಾರೆ. ಕುಲಪಂಚಾಯಿತಿಯಲ್ಲಿ ಎಲ್ಲರು ಚರ್ಚಿಸಿ ನ್ಯಾಯದ ತಿರಳನ್ನು ಸ್ಪಷ್ಟವಾಗಿ ತಿಳಿದುಕೊಂಡು ತರುವಾಯ ಯಾರದು ಸರಿ, ಯಾರದು ತಪ್ಪು ಎಂದು ನಿರ್ಣಯಿಸುತ್ತಾರೆ. ತಪ್ಪಿಸ್ಥನಾದವನು ಎಲ್ಲರ ಸಮ್ಮುಖದಲ್ಲಿಯೇ ತಪ್ಪು ಒಪ್ಪಿಕೊಳ್ಳಲು ಸೂಚಿಸುತ್ತಾರೆ. ತಪ್ಪಿಸ್ಥನಾದವನು ತನ್ನ ತಪ್ಪನ್ನು ಒಪ್ಪಿಕೊಂಡ ನಂತರ ಹಿರಿಯರು ಹಾಕಿದ ದಂಡವನ್ನು ಕೊಡುವುದರ ಜೊತೆಗೆ ನ್ಯಾಯ ಪಂಚಾಯತಿಯ ಖರ್ಚುವೆಚ್ಚವನ್ನು ಕೊಡಬೇಕೆಂದು ಸೂಚಿಸುತ್ತಾರೆ. ಆ ಸಮಯದಲ್ಲಿ ಅಪರಾಧಿಯು ದಂಡ ಅಥವಾ ಖರ್ಚು ಕೊಡಲು ಒಪ್ಪದಿದ್ದಲ್ಲಿ ಅವನನ್ನು ಹಿರಿಯರು ಸಮುದಾಯದಿಂದ ಹೊರಗಿಡಲು ನಿರ್ಧರಿಸುತ್ತಾರೆ. ಜೋತೆಗೆ ಕುಟುಂಬ ಸಮೇತ ಬಹಿಷ್ಕಾರದಲ್ಲಿ ಇಡುತ್ತಾರೆ.

ಬಹಿಷ್ಕೃತ ಕುಟುಂಬದವರು ಯಾವುದೇ ಜನನ, ಮರಣ, ಮದುವೆ ಮುಂತಾದ ಶುಭ ಅಶುಭ ಸಮಾರಂಭಗಳಲ್ಲಿ ಯಾರು ಭಾಗವಹಿಸುವುದಿಲ್ಲ. ನಂತರ ಈ ಕುಟುಂಬದವರು ಸಮುದಾಯದಲ್ಲಿ ಸೇರಬಯಸಿದರೆ ಮತ್ತೇ ಸಮುದಾಯದ ಹಿರಿಯರು ಒಂದಗೂಡಿ ಅವನಿಂದ ದಂಡವನ್ನು ಪಡೆದು ಸಾರ್ವಜನಿಕವಾಗಿ ಎಲ್ಲರ ಎದುರು ತಿಲಕ ಹಚ್ಚುತ್ತಾರೆ. ಸಮುದಾಯದ ಕಟ್ಟುಪಾಡುಗಳಿಗೆ ತಲೆಬಾಗಿ ಇನ್ನೊಮ್ಮೆ ಇಂತಹ ತಪ್ಪುಗಳು ನಮ್ಮಿಂದ ಆಗದ ಹಾಗೆ ನೋಡಿಕೊಳ್ಳುತ್ತೇವೆ ಎಂದು ಸಮುದಾಯದ ಹಿರಿಯರ ಮುಂದೆ ತಲೆಬಾಗಿ

ವಿನಂತಿಸಿಕೊಳ್ಳುತ್ತಾನೆ. ಸಮುದಾಯದ ಮುಖಂಡರು ಜಾತಿಯಲ್ಲಿ ಸೇರಲು ಅನುಕೂಲ ಮಾಡಿಕೊಡುತ್ತಾರೆ.

### ನ್ಯಾಯ ನಿರ್ಣಯಗಳು

ಸುಡುಗಾಡು ಸಿದ್ಧರು ತೀರ್ಪುಗಳು ಕಠಿಣ ಮತ್ತು ತೀಕ್ಷ್ಣತೆಗೆ ಹೆಸರು ಪಡೆದಿವೆ. ದಂಡದ ಮೇಲೆ ದಂಡ ಶಿಕ್ಷೆಯ ಮೇಲೆ ಶಿಕ್ಷೆ ಇವರಲ್ಲಿ ಸರ್ವೆಸಾಮಾನ್ಯ. ನ್ಯಾಯ ಬಯಸಿ ಹೋದ ವ್ಯಕ್ತಿಗೆ ಸಂಪೂರ್ಣ ಪರಿಹಾರ, ಅಪರಾಧಿಗೆ ಉಗ್ರಶಿಕ್ಷೆ ಮತ್ತು ಸಮಾಜದ ಹಿರಿಯರಿಂದ ಬಹಿಷ್ಕಾರ ಇವೆಲ್ಲವುಗಳು ನ್ಯಾಯ ಮಂಡಳಿಯು ತನ್ನ ಹಿಡಿತದಿಂದ ಯಾವುದೇ ಅಧಿಕಾರ ವನ್ನು ಬೇರೆ ನ್ಯಾಯಕಟ್ಟೆಯ ಕುಲಪಂಚರಿಗೆ ಬಿಟ್ಟು ಕೊಡುವುದಿಲ್ಲ. ಎಲ್ಲ ನಿರ್ಣಯಗಳನ್ನು ಅವರೇ ತಿರ್ಮಾನಿಸುವರು. ನ್ಯಾಯ ಪಂಚಾಯತಿಯು ತನ್ನದೇ ಆದ ನಿಯಮಗಳನ್ನು ಪಾಲಿಸುತ್ತಾ ಬಂದಿದ್ದು ಪ್ರಾಮಾಣಿಕವಾಗಿ ನ್ಯಾಯವನ್ನು ಕೊಡುವಾಗ ಅಮಾಯಕ ಜನರಿಗೆ ನ್ಯಾಯ ಸಿಗಬೇಕೆಂಬುದೆ ಇವರ ಉದ್ದೇಶ. ಹೀಗಾಗಿ ಎಂತಹ ವ್ಯಾಜ್ಯಗಳು ಇದ್ದರು ಪರಿಹಾರ ಕೊಡಲು ಬಯಸುತ್ತಾರೆ. ಇವರು ವೈವಾಹಿಕ ನ್ಯಾಯ ನಿರ್ಣಯ ಸಾರ್ವಜನಿಕ ಅಪರಾಧ ವ್ಯಾಜ್ಯ ಹೀಗೆ ಎಲ್ಲ ತರಹದ ನ್ಯಾಯಗಳಿಗೆ ತಿರ್ಪುನೀಡುತ್ತಾರೆ.

ಕುಲಪಂಚಾಯತಿ ಗೊತ್ತು ಮಾಡಿದ ದಿನದಂದು ಎಲ್ಲರು ಬಂದು ಸೇರುತ್ತಾರೆ. ನ್ಯಾಯ ಕಟ್ಟೆಯ ಎದುರಿನ ಒಂದು ಮೂಲೆಯಲ್ಲಿ ನ್ಯಾಯ ಬಯಸಿ ಬಂದ ವ್ಯಕ್ತಿಗಳು ಕುಳಿತಿರುತ್ತಾರೆ. ವಾದಿ ಪ್ರತಿವಾದಿಗಳಿಂದ ಅಹವಾಲುಗಳನ್ನು ಕೇಳುತ್ತಾರೆ. ಇಲ್ಲಿ ನ್ಯಾಯ ಬಯಸಿ ಬಂದವ ರಲ್ಲಿ ಹೆಣ್ಣು ಮಕ್ಕಳಿಗೆ ನ್ಯಾಯ ಕಟ್ಟೆಗೆ ಪ್ರವೇಶವಿರುವುದಿಲ್ಲ. ಆದಾಗ್ಯು ನ್ಯಾಯ ಬಯಸಿ ಬಂದ ಹೆಣ್ಣು ಮಕ್ಕಳಿಗೆ ನ್ಯಾಯ ನಡೆಸುವ ಸ್ಥಳದಿಂದ ದೂರ ಕುಳಿತುಕೊಳ್ಳಲು ಹೇಳಿ ಅವಳು ಹೇಳ ಬಯಸಿದ ವಿಷಯವನ್ನು ವಾಲಿಕಾರನ ಮುಖಾಂತರ ಕೇಳಿ ಪಡೆಯುತ್ತಾರೆ. ನ್ಯಾಯ ಕಟ್ಟೆಯಲ್ಲಿ ಅವರು ಹೇಳಿದ ವಿಷಯದ ಮೇಲೆ ಚರ್ಚಿಸಿ ಒಂದು ನಿರ್ಣಯಕ್ಕೆ ಬರುತ್ತಾರೆ. ತಪ್ಪುಒಪ್ಪುಗಳನ್ನು ಎಲ್ಲರ ಎದುರಿಗೆ ತಿಳಿಸುತ್ತಾರೆ. ನ್ಯಾಯ ಕಟ್ಟೆಯಲ್ಲಿ ನ್ಯಾಯ ನಿರ್ಣಯವಾದ ಮೇಲೆ ಕುಲಪಂಚರ ಆದೇಶದಂತೆ ತಪ್ಪಿಸ್ಥಿತರಿಗೆ ತಪ್ಪುದಂಡ ಬೊಟ್ಟು ವಾಲಿಕಾರನ ಮುಖಾಂತರ ಹಚ್ಚುತ್ತಾರೆ. ತಪ್ಪು ಮಾಡಿದವನು ಇನ್ನು ಮುಂದೆ ಇಂತಹ ತಪ್ಪುಗಳನ್ನು ಮಾಡಬಾರದು ಎನ್ನುವ ಸಂಕೇತವಾಗಿ ಬೊಟ್ಟು ಇಡುತ್ತಾರೆ. ಅಲ್ಲೆ ಇದೇ ಸಂದರ್ಭದಲ್ಲಿ ತಪ್ಪು ಮಾಡಿದವನಿಗೆ ದಂಡ ಸಾರುತ್ತಾರೆ. ತಪ್ಪಿತಸ್ಥರು ಕುಲಪಂಚಾಯಿತಿಯ ನಿರ್ಣಕ್ಕೆ ಒಪ್ಪಿಕೊಳ್ಳದಿದ್ದರೆ ಆತನಿಗೆ ಬಹಿಷ್ಕಾರ ಹಾಕುತ್ತಾರೆ. ಅಲ್ಲದೇ ಸಾರ್ವತ್ರಿಕವಾಗಿ ಇಂಥವನ ಜೊತೆಗೆ ಸಂಬಂಧ ಬೆಳೆಸದಿರಲು ತಾಕಿತು ಮಾಡಲಾಗುತ್ತದೆ.

ಒಂದು ದಿವಸ ಒಂದೇ ನ್ಯಾಯದ ಬಗ್ಗೆ ವಿಚಾರಣೆ ನಡೆಯುತ್ತದೆ. ಯಾವುದೇ ವ್ಯಾಜ್ಯದ ಬಗ್ಗೆ ಇಡೀ ಒಂದು ದಿನ ಚರ್ಚಿಸಿ ತಿರ್ಮಾನಕ್ಕೆ ಬಂದು ನಿರ್ಣಯ ನೀಡುತ್ತಾರೆ. ಈ ಸಮುದಾಯದಲ್ಲಿ ಹೆಚ್ಚಾಗಿ ಸಾಮಾಜಿಕ ನ್ಯಾಯಗಳು ಕಂಡುಬರುತ್ತವೆ. ಗಂಡ ಹೆಂಡತಿಯನ್ನು ಬಿಟ್ಟರೆ ವಿಚಾರಿಸಿ ಅವರನ್ನು ಒಂದೆಡೆಗೆ ಸೇರಿಸಲು ಸಲಹೆ ಮಾಡುತ್ತಾರೆ. ಕೊಲೆ ಸುಲಿಗೆ

ಗಳಂತಹ ವಿಚಾರಗಳಿದ್ದರೆ ಸಮಗ್ರವಾಗಿ ಚರ್ಚಿಸಿ ತಪ್ಪಿತಸ್ಥರ ಮೇಲೆ ಕ್ರಮಕೈಕೊಳ್ಳುವುದರ ಜೊತೆಗೆ ಅಂತಹ ಕುಟುಂಬಗಳಿಗೆ ಪರಿಹಾರ ಕೊಡಿಸುವುದು ಇವರ ಉದ್ದೇಶವಾಗಿರುತ್ತದೆ. ಇವರಲ್ಲಿ ಕಳ್ಳತನ ಮಾಡಿದರೆ ಶಿಕ್ಷಿಸುವುದುಂಟು. ಹೆಣ್ಣು ಓಡಿಹೋದಲ್ಲಿ ಅಂತಹ ಕುಟುಂಬ ದವರನ್ನು ಇಂತಹ ಸಂದರ್ಭದಲ್ಲಿ ವಿಚಾರಿಸಿ ಹೆಣ್ಣಿನವರಿಂದ ತಪ್ಪಾಗಿದ್ದರೆ ಅವರಿಗೆ ಮಾನದಂಡವನ್ನು ಹಾಕುತ್ತಾರೆ. ಓಡಿ ಹೋಗಿ ಇವರ ಜಾತಿಗಿಂತ ಕೆಳಗಿನವರೊಂದಿಗೆ ವಿವಾಹ ವಾಗಿದ್ದರೆ, ಅಂಥವಳಿಗೆ ಮರಳಿ ಸಮುದಾಯದಲ್ಲಿ ಸೇರಿಸಿಕೊಳ್ಳುವುದಿಲ್ಲ. ಒಂದುವೇಳೆ ತಿಳಿದು ತಿಳಿಯದೇ ಹಾಗೆ ತವರು ಮನೆಯಲ್ಲಿ ಬಂದು ಸೇರಿದರೆ ಆ ಕುಟುಂಬವನ್ನು ಬಹಿಷ್ಕಾರ ಹಾಕಲಾಗುತ್ತದೆ. ನಂತರ ಈ ಕುಟುಂಬವು ನ್ಯಾಯ ಬೇಡಿ ಬಂದರೆ ಅವರಿಗೆ ಪರಿಹಾರ ಕೊಟ್ಟು ಅವಳನ್ನು ಸಮುದಾಯದಲ್ಲಿ ಸೇರಿಸಿಕೊಳ್ಳುತ್ತಾರೆ. ತಪ್ಪು ಮಾಡಿದ ವ್ಯಕ್ತಿಗಳು ತಮ್ಮ ತಪ್ಪನ್ನು ಒಪಿಕೊಳ್ಳದಿದ್ದರೆ ದೇವರ ಮೇಲೆ ಪ್ರಮಾಣ ಮಾಡಿಸುತ್ತಾರೆ. ಆಗ ವ್ಯಕ್ತಿಯು ತಪ್ಪನ್ನು ಒಪ್ಪಿಕೊಳ್ಳುತ್ತಾನೆ ಎಂಬ ನಂಬಿಕೆಯು ಕುಲುಪಂಚಾಯತಿಯವರದ್ದಾಗಿರುತ್ತದೆ. ತಪ್ಪು ಮಾಡಿದವರಿಂದ ದಂಡವನ್ನು ಕಟ್ಟಲು ಹೇಳುತ್ತಾರೆ ಮತ್ತು ಎದುರಾಳಿಗಳಿಗೂ ದಂಡ ವಿಧಿಸುತ್ತಾರೆ. ಇದರಿಂದ ಮುಂದೆ ಇತಂಹ ತಪ್ಪುಗಳು ನಡೆಯಬಾರೆಂಬುದೇ ಇದರ ಉದ್ದೇಶ ವಾಗಿದೆ.

ಜನರಿಗೆ ಅನ್ಯಾಯ ಮಾಡುವುದು ಮತ್ತು ಅನ್ಯಾಯಕ್ಕೆ ಒಳಗಾಗುವವರನ್ನು ಇವರು ಸಹಿಸಲಾರರು. ಇದಕ್ಕಾಗಿ ವಾದಿ ಮತ್ತು ಪ್ರತಿವಾದಿಗಳಿಬ್ಬರಿಗೂ ದಂಡ ಮತ್ತು ಶಿಕ್ಷೆಯನ್ನು ವಿಧಿಸುವ ಮೂಲಕ ಕುಲಪಂಚಾಯತಿಯ ಸ್ಥಾನವನ್ನು ಕಾಯ್ದುಕೊಳ್ಳುತ್ತಾ ಬಂದಿದ್ದಾರೆ. ದೈವಕ್ಕೆ ಹೆದರಿ ಯಾರು ತಪ್ಪು ಮಾಡಲಾರರು ಹೀಗಾಗಿ ತಮ್ಮದೆ ಆದ ನ್ಯಾಯಕಟ್ಟೆಯ ಪಂಚಾಯಿತಿಯಲ್ಲಿ ಪರಿಹಾರ ದೊರೆಯದಿದ್ದ ಸಂದರ್ಭದಲ್ಲಿ ಹತ್ತಿರವಿರುವ ಬೇರೆ ಕಟ್ಟೆಯ ನ್ಯಾಯಧೀಶರನ್ನು ಕರೆಸಿ ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಹೀಗೆ ಇವರಲ್ಲಿ ಸಮುದಾಯ ಬೆಳೆದಂತೆಲ್ಲ ನ್ಯಾಯ ಕಟ್ಟೆಯ ನ್ಯಾಯಾಧೀಶರ ಸಂಖ್ಯೆ ಬೆಳೆಯುತ್ತಾ ಬಂದಿದೆ. ಎಲ್ಲ ಅಲೆಮಾರಿ ಸಮುದಾಯಗಳಲ್ಲಿ ತಮ್ಮ ಒಳ ವ್ಯವಸ್ಥೆಗಳನ್ನು ಬಗೆಹರಿಸಿ ಪರಿಹಾರ ಕಂಡುಕೊಳ್ಳವಂತೆ ಇವರ ನ್ಯಾಯ ಪಂಚಾಯತಿ ವ್ಯವಸ್ಥೆಯು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿದೆ.

### ಶಿಕ್ಷೆಗಳ ವಿವರ

ಕುಲಪಂಚರು ಅಥವಾ ನ್ಯಾಯದೀಶರು ತಪ್ಪಿತಸ್ಥರನ್ನು ಹಲವು ಬಗೆಯ ಶಿಕ್ಷೆ, ದಂಡ ಮತ್ತು ಸಮುದಾಯದಿಂದ ಬಹಿಷ್ಕಾರ ಹಾಕುವ ಪದ್ಧತಿಯು ಇವರಲ್ಲಿ ಇರುವುದು. ಹೀಗಾಗಿ ಸುಡುಗಾಡು ಸಿದ್ಧರ ನ್ಯಾಯ ಪಂಚಾಯತಿಯಲ್ಲಿ ಅಪಾರವಾದ ನಂಬಿಕೆ ಇದ್ದು ಸಮುದಾಯ ದಲ್ಲಿ ದುಷ್ಟ ಮೋಸ, ವಂಚನೆ, ದುರ್ನಡತೆಯಿಂದ ನಡೆಯುವ ವ್ಯಕ್ತಿಗಳನ್ನು ನಿಯಂತ್ರಣ ದಲ್ಲಿಡಲು ಸಾಧ್ಯವಾಗಿದೆ.

ನ್ಯಾಯ ಪಂಚಾಯತಿ ನಡೆಯುವಲ್ಲಿ ನ್ಯಾಯ ಬಯಸಿ ಬಂದವರು ನ್ಯಾಯಾಧೀಶರ ಮುಂದೆ ಜಗಳವಾಡಿದರೆ, ಹೊಡೆದಾಡಿದರೆ, ಕೊಲು, ಬಡಿಗೆ, ಚಪ್ಪಲಿ ಹಾಗೂ ಅಶ್ಲೀಲ ಪದಗಳಿಂದ ಬೈಗುಳಗಳನ್ನು ಮಾಡಿದರೆ ಅಂಥವರಿಗೆ ದಂಡವನ್ನು ಹಾಕುತ್ತಾರೆ. ಮದುವೆ ಯಾಗದೇ ಇರುವ ಹೆಣ್ಣನ್ನು ವಾರಸುದಾರರ ಕಡೆಯಿಂದ ಓಡಿಸಿಕೊಂಡು ಹೋದರೆ ಇಂಥಹ ಸಮಯದಲ್ಲಿ ನ್ಯಾಯ ನಡೆಯುವ ಖರ್ಚು ವೆಚ್ಚಗಳ ಜೊತೆಗೆ ದಂಡವನ್ನು ಹಾಕುತ್ತಾರೆ. ಮದುವೆಯಾದವನು ಇನ್ನೊಬ್ಬನ ಹೆಂಡತಿಯೊಡನೆ ಅನೈತಿಕ ಸಂಬಂಧವನ್ನು ಇಟ್ಟು ಕೊಂಡಿದ್ದು ಇಲ್ಲವೆ ಇಬ್ಬರು ಓಡಿಹೋದಲ್ಲಿ ಶಿಕ್ಷಿಸುತ್ತಾರೆ. ಗಂಡ ಹೆಂಡರ ಜಗಳ ವೈಮನಸ್ಸು ವಿರಸ ಉಂಟಾದ ಸಂದರ್ಭದಲ್ಲಿ ಇವರಿಗೆ ಬಿಡುಗಡೆ ಆಗುವ ಸ್ಥಿತಿ ಕಂಡು ಬಂದಲ್ಲಿ ಅವಳನ್ನು ತಂದೆತಾಯಿ ಮನೆಗೆ ಕಳುಹಿಸಿ ತಪ್ಪಿತಸ್ಥರಿಂದ ಪಂಚಾಯತಿಯ ಖರ್ಚು ವೆಚ್ಚಗಳನ್ನು ಪಡೆಯುತ್ತಾರೆ. ಇವರಲ್ಲಿ ಅಂತರ ಜಾತಿ ವಿವಾಹಕ್ಕೆ ಆಸ್ಪದ ಇರುವುದಿಲ್ಲ. ಇವರಲ್ಲಿ ತಮಗಿಂತ ಕೆಳಗಿನ ಜಾತಿಯ ಹೆಣ್ಣನ್ನು ಮದುವೆಯಾಗಿದ್ದಾದರೆ ಸಮುದಾಯದಲ್ಲಿ ಸೇರಿಸಿಕೊಳ್ಳುವುದಿಲ್ಲ. ಅಲ್ಲದೆ ಅವರನ್ನು ಸಮುದಾಯದಿಂದ ಬಹಿಷ್ಕಾರಿಸುತ್ತಾರೆ. ಅಲ್ಲದೆ ತಮ್ಮ ಜಾತಿಯವರಿಗಿಂತ ಕೆಳಗಿನ ಜಾಯಿವರಿಂದ ಊಟ ತೆಗೆದುಕೊಳ್ಳುವುದಾಗಲಿ ಊಟ ಮಾಡುವುದಾಗಲಿ ಕಂಡುಬಂದರೆ ಕುಲಗೆಟ್ಟವರು ಎಂದು ಹೇಳಿ ಅಂಥವರ ನಾಲಿಗೆಯ ಮೇಲೆ ಬಂಗಾರದ ಕಡ್ಡಿಯಿಂದ ಬರೆ ಹಾಕಿ ಸಮುದಾಯದಲ್ಲಿ ಸೇರಿಸಿಕೊಳ್ಳುವರು. ಕಳ್ಳತನ ಮಾಡಿದವರಿಗೆ ದಂಡ ಹಾಕುವ ಪದ್ಧತಿ ಇವರಲ್ಲಿದೆ. ಅಲ್ಲದೆ ಅತ್ಯಾಚಾರ, ವ್ಯಭಿಚಾರ ಮಾಡಿದವರಿಗೆ ಶಿಕ್ಷಿಸುವುದುಂಟು. ಇವರ ನ್ಯಾಯ ಪಂಚಾಯತಿಯ ವ್ಯವಸ್ಥೆಯು ಬುಡ್ಗ ಜಂಗಮ ಸಮುದಾಯಕ್ಕೂ ಹೋಲುವುದುಂಟು.

# ೭

# ಆರ್ಥಿಕ ಜೀವನ

ಸುಡುಗಾಡುಸಿದ್ಧರ ಇಂದಿನ ಆರ್ಥಿಕ ಸ್ಥಿತಿಗತಿ ಹೇಳಿಕೊಳ್ಳುವಷ್ಟು ಸುಧಾರಿಸಿಕೊಂಡಿರುವುದಿಲ್ಲ. ಇವರು ಬಹುತೇಕವಾಗಿ ಹಿಂದಿನಂತೆಯೇ ಭೀಕ್ಷಾಟನೆಯಿಂದ ಬದುಕನ್ನು ಸಾಗಿಸುತ್ತಾ ಬಂರುತಿದ್ದಾರೆ. ಇವರ ಮೂಲ ಕುಲಕಸಬು ಸುಡುಗಾಡು ಸಿದ್ಧ ಹಾಗೂ ನಿರಂಜಯ್ಯನ ಕಾಯಕದಂತಹ ಭಿಕ್ಷೆ ಬೇಡುವ ಕಸುಬಾಗಿದೆ. ಇವರು ಒಂದಡೆ ನೆಲಸದೆ ಊರಿಂದೂರಿಗೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ಭಿಕ್ಷೆಬೇಡಿ ಕುಟುಂಬದ ನಿರ್ವಹಣೆ ನಡೆಸುತ್ತಾರೆ. ಭಿಕ್ಷಾಟನೆ ಎಂಬುದು ಒಂದು ಪವಿತ್ರವಾದ ಕಾಯಕವೆಂಬುದು ಸಿದ್ಧರ ಅಭಿಪ್ರಾಯವಾಗಿದೆ. ಇಂದಿಗೂ ತಮ್ಮದೆ ಆದ ಪ್ರಾದೇಶಿಕ ಗ್ರಾಮಗಳ ವತನದ ಹಳ್ಳಿಯಲ್ಲಿಯೆ ಭಿಕ್ಷೆ ಬೇಡುತ್ತಾರೆ. ತಮ್ಮ ಹಿರಿಯರಿಂದ ಪಡೆದ ಭಿಕ್ಷಾಟನೆಯ ಹಕ್ಕು ಪತ್ರಗಳ ಆಧಾರದ ಮೇಲೆ ತಮಗೆ ತಿಳಿಯಪಡಿಸಿದ ಪ್ರದೇಶಗಳಲ್ಲಿ ಮಾತ್ರ ಭಿಕ್ಷೆಯನ್ನು ಬೇಡುತ್ತಾರೆ.

ವರ್ಷದುದ್ದಕ್ಕೂ ಭಿಕ್ಷಾಟನೆ ಮಾಡುತ್ತಾ ಒಂದಡೆ ಬಹಳ ದಿನಗಳವರೆಗೆ ನೆಲೆ ನಿಲ್ಲದೆ ತಮ್ಮ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳುತ್ತಾರೆ. ಹೀಗಾಗಿ ಇವರು ಶಾಸ್ವತವಾಗಿ ಒಂದಡೆ ನೆಲಸದೆ ಅಲೆಮಾರಿಗಳಾಗಿದ್ದಾರೆ. ಒಂದು ವರ್ಷದಲ್ಲಿ ಎರಡು ತಿಂಗಳು ತಮ್ಮ ಹಟ್ಟಿಗಳಿಗೆ ಬಂದು ನೆಲಸಿ ಮದುವೆ, ಜಾತ್ರೆ, ಶುಭಕಾರ್ಯಕ್ರಮಗಳಿಗೆ ಹಾಜರಾಗುತ್ತಾರೆ. ಹೆಚ್ಚಾಗಿ ದಸರಾ, ದೀಪವಾಳಿ ಸಂದರ್ಭದಲ್ಲಿ ತಮ್ಮ ಬಿಡಾರಕ್ಕೆ ಬರುವುದು ಹೆಚ್ಚು ಇದೇ ವೇಳೆಯಲ್ಲಿ ತಮ್ಮ ಎಲ್ಲ ಬಂಧುವರ್ಗದವರನ್ನು ಕೂಡುತ್ತಾರೆ.

ಭಿಕ್ಷಾಟನೆಯ ನಂತರ ಬಿಡುವಿನ ಸಮಯದಲ್ಲಿ ಬೇಟೆಯಾಡಲು ಹೋಗುತ್ತಾರೆ. ಹೀಗೆ ಬೇಟೆಯಾಡಿ ಬಂದ ಪ್ರಾಣಿಗಳ ಮಾಂಸವನ್ನು ಹಂಚಿ ತಿನ್ನುತ್ತಾರೆ. ಇವರು ಚಳಿಗಾಲವಿರಲಿ ಮಳೆಗಾಲವಿರಲಿ ಹೊಟ್ಟೆಪಾಡಿಗಾಗಿ ಊರೂರು ಅಲೆದಾಡುತ್ತಾರೆ. ಅಲೆಮಾರಿಗಳು ಸ್ತ್ರೀಯರನ್ನು ಅಷ್ಟೊಂದು ಗೌರವದಿಂದ ಕಾಣುವುದಿಲ್ಲ ಇವರಲ್ಲಿ ಹೆಣ್ಣು ಮಕ್ಕಳು ಕೂಡ ಕುಟುಂಬದ ನಿರ್ವಹಣೆಗಾಗಿ ಚಾಪೆ ಹೆಣೆಯುವದು ಮತ್ತು ಕೌದಿಯನ್ನು ಹೊಲಿಯುವುದು, ಸಾಧ್ಯವಾದಲ್ಲಿ ಮನೆಯ ಕೆಲಸ, ಜೊತೆಗೆ ಕೂಲಿ ಕೆಲಸವನ್ನು ಮಾಡಿ ಜೀವಿಸುವರು. ಭಿಕ್ಷಾಟನೆ ಜೊತೆಗೆ ತಮ್ಮಲ್ಲಿ ಸಂಗ್ರಹಿಸಿಕೊಂಡ ಗಿಡಮೂಲಿಕೆಗಳಿಂದ ಜನರಿಗೆ ಔಷಧಿಗಳನ್ನು

ಕೊಡುತ್ತಾರೆ. ಹಾಗೆಯೇ ಭಿಕ್ಷಾಟನೆಯ ಸಂದರ್ಭದಲ್ಲಿ ತಮ್ಮ ಕೈಚಳಕದ ವಿದ್ಯೆಯನ್ನು ಕಲಾಪ್ರದರ್ಶಿಸಿ ಜನರಿಂದ ಭಿಕ್ಷೆಯನ್ನು ಪಡೆಯುವರು. ಕ್ರಮೇಣವಾಗಿ ಇವರು ತಮ್ಮ ಕುಲಕಸುಬು ಸುಡುಗಾಡು ಸಿದ್ಧ ಹಾಗೂ ನಿರಂಜಯ್ಯನ ಕಾಯಕವನ್ನು ಕಡಿಮೆಗೊಳಿಸಿದ್ದಾರೆ. ಕಾರಣ ಈ ವೃತ್ತಿಯವರನ್ನು ಇತರೆ ಸಮುದಾಯದವರು ಕೀಳಾಗಿ ನೋಡುವರು. ಹೀಗಾಗಿ ಇಂದಿನ ಪೀಳಿಗೆಯು ಈ ವೃತ್ತಿಯನ್ನು ಮಾಡಲು ಹಿಂಜರಿಯುತ್ತಿದೆ. ಊರುಗಳನ್ನು ಅಲೆದಾಡುವುದನ್ನು ನಿಲ್ಲಿಸಿ ತಮಗೆ ಅನುಕೂಲವಾದ ಗ್ರಾಮಗಳನ್ನು ಗುರುತಿಸಿಕೊಂಡು ಪುರುಷರು ಕೂಲಿ ಕೆಲಸಗಳಿಗೆ ಹೋಗುತ್ತಾರೆ ಮತ್ತು ಹೆಣ್ಣು ಮಕ್ಕಳು ಚಾಪೆ ಹೆಣೆಯುವುದು, ಸಣ್ಣಪುಟ್ಟ ವ್ಯಾಪಾರ ಮಾಡಿಕೊಂಡು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಾರೆ. ಹೀಗಾಗಿ ಇವರ ಕುಟುಂಬಗಳ ಆರ್ಥಿಕ ಪರಿಸ್ಥಿತಿ ಬಹು ದುಸ್ತರವಾಗಿದೆ. ಇನ್ನು ಅನೇಕ ಕುಟುಂಬಗಳು ಗುಡಾರದಲ್ಲಿ ಜೀವನ ಕಳೆಯುತ್ತಾರೆ. ಮತ್ತು ಜೀವನೋಪಾಯಕ್ಕಾಗಿ ಬೇರೆ ವೃತ್ತಿಗಳನ್ನು ಕೈಗೊಂಡು ಕುಟುಂಬಗಳನ್ನು ಸಲಹುತ್ತಿದ್ದಾರೆ. ಇವರಿಗೆ ಸಾಮಾಜಿಕ ಆರ್ಥಿಕ ಭದ್ರತೆ ಇರುವುದಿಲ್ಲ. ಒಟ್ಟಾರೆಯಾಗಿ ಇವರ ಬದುಕು ಅತಂತ್ರ ಸ್ಥಿತಿಯಲ್ಲಿದೆ.

ಇತ್ತೀಚೆಗೆ ಸರ್ಕಾರದಿಂದ ಕೆಲವು ಕುಟುಂಬಗಳು ಆಶ್ರಯ ಮನೆಗಳನ್ನು ಪಡೆದಿವೆ. ಇನ್ನು ಕೆಲವು ಅನುಕೂಲಸ್ಥ ಕುಟುಂಬಗಳು ತುಂಡು ಜಮೀನುಗಳನ್ನು ಹೊಂದಿ ಕೃಷಿ ಕೆಲಸವನ್ನು ಮಾಡುತ್ತಿದ್ದಾರೆ. ಹಾಗೆಯೇ ಸರ್ಕಾರದ ನೆರವಿನಿಂದ ಬ್ಯಾಂಕುಗಳಿಂದ ಸಣ್ಣ ಪ್ರಮಾಣದ ಸಾಲವನ್ನು ಪಡೆದು ಕುರಿ, ಕೋಳಿ, ಮೊಲ ಸಾಕಾಣಿಕೆ ಮತ್ತು ಪಶುಗಳನ್ನು ಹೊಂದಿ ಹೈನುಗಾರಿಕೆಯಿಂದ ಕುಟುಂಬಗಳು ನಿರ್ವಹಣೆಯಾಗುತ್ತಿದೆ. ಅಲ್ಲಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣ ಕಲಿಯಲು ಕಳುಹಿಸುತ್ತಿದ್ದಾರೆ. ಇವರು ನಾಳೆಯ ಬದುಕಿಗಾಗಿ ಗಂಭೀರವಾಗಿ ಚಿಂತೆ ಮಾಡುವುದಿಲ್ಲ.

ದೇಶಕ್ಕೆ ಸ್ವಾತಂತ್ರ್ಯ ಬಂದು ೬೦ ವರ್ಷಗಳು ಕಳೆದರೂ ತಮ್ಮ ಹೆಗಲಿನ ಜೋಳಿಗೆ ಯಿಂದ ಮುಕ್ತಿ ದೊರಕಿಸಿಕೊಳ್ಳುವದು ತಪ್ಪಲಿಲ್ಲ. ಜೀವನ ಪರ್ಯಂತ ಗುಡಾರ ಗಳಲ್ಲಿಯೇ ಸುಖವನ್ನು ಕಾಣುತ್ತಾ, ಮಕ್ಕಳ ಭವಿಷ್ಯದ ಬಗೆಗೆ ಚಿಂತನೆ ನಡೆಸದಿರುವುದು ಎದ್ದು ಕಾಣುತ್ತದೆ. ದಲಿತ ಸಮುದಾಯಗಳಲ್ಲಿಯೇ ಅತಿ ನಿಕೃಷ್ಟ ಬುದುಕ ಸಾಗಿಸಿರುವ ಸಮುದಾಯವಿದು.

### ಮೂಲ ಕಸುಬು

ಸುಡುಗಾಡು ಸಿದ್ಧರು ಅಲೆಮಾರಿ ಸಮುದಾಯದವರಾಗಿದ್ದು ಹೊಟ್ಟೆಯ ಪಾಡಿಗಾಗಿ ಊರಿಂದ ಊರಿಗೆ ಅಲೆದು ಸುಡುಗಾಡು ಸಿದ್ಧ ಹಾಗೂ ನಿರಂಜಯ್ಯ ಎಂಬ ಎರಡು ಕಾಯಕ ದಿಂದ ಭಿಕ್ಷಾಟನೆ ಮಾಡಿ ಜೀವನ ಸಾಗಿಸುತ್ತಾ ಬಂದಿದ್ದಾರೆ ಎಂದು ಹೇಳಿಯಾಗಿದೆ. ಬೆಳಿಗ್ಗೆ ೫ ಗಂಟೆಗೆ ಎದ್ದು ಭಿಕ್ಷೆ ಬೇಡುವುದರ ಸಲುವಾಗಿ ಅವರ ಬಳಿ ಇರುವ ಎರಡು ಜೋಳಿಗೆ ಗಳನ್ನು ಹಾಕಿಕೊಂಡು ತಾವು ನೆಲಸಿದ ಗ್ರಾಮದಿಂದ ಬೇರೆ ಗ್ರಾಮಗಳಿಗೆ ಹೋಗಿ ಆ ಗ್ರಾಮದ ಸಮೀಪದಲ್ಲಿರುವ ಗಿಡದಡಿಯಲ್ಲಾಗಲಿ ಅಥವಾ ಗುಡಿ ಗುಂಡಾರಗಳಲ್ಲಾಗಲಿ ಇಲ್ಲವೇ

ಊರ ಹೊರಗಿನ ಕೆರೆ, ಬಾವಿ, ಹಳ್ಳದ ದಂಡೆಯ ಮೇಲೆ ಕುಳಿತು ತಮ್ಮ ಭಿಕ್ಷಾಟನೆಯ ವೇಷವನ್ನು ಧರಿಸಲು ಸನ್ನದ್ಧರಾಗುತ್ತಾರೆ.

ಭವಿಷ್ಯ ಹೇಳುತ್ತಾ ಭಿಕ್ಷಾಟನೆಯನ್ನೇ ನಂಬಿ ಬದುಕುವ ಬುಡಕಟ್ಟಿನ ಜನ ಸುಡುಗಾಡು ಸಿದ್ಧರು. ಇವರು ಆಂಧ್ರದ ಮೂಲದವರೆಂಬುದು ವಿದ್ವಾಂಸರ ಮಾತು. ಕರ್ನಾಟಕದ ತುಂಬೆಲ್ಲ ಕಂಡು ಬರುವ ಇವರು ಬಿಜಾಪುರ, ಬಳ್ಳಾರಿ, ಗುಲಬರ್ಗಾ, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು ಮತ್ತು ಧಾರವಾಡ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಗಂಡಸರ ಉಡುಗೆ ತೊಡುಗೆಗಳಲ್ಲಿ ಯಾವುದೇ ಬಗೆಯ ವಿಶೇಷತೆಗಳು ಕಂಡುಬರುವುದಿಲ್ಲ. ಹಿಂದು ಸ್ತ್ರೀ ಪುರುಷರು ಧರಿಸುವ ಉಡಿಗೆ ತೊಡುಗೆಗಳನ್ನೇ ಇವರು ಧರಿಸುತ್ತಾರೆ. ಭಿಕ್ಷಾಟನೆಗಾಗಿ ಊರಿನಲ್ಲಿ ಸಂಚಾರಿಸುವಾಗ ವಿಶೇಷ ಬಗೆಯ ಉಡುಗೆ ತೊಡುಗೆಗಳನ್ನು ಹಾಕಿಕೊಳ್ಳುತ್ತಾರೆ. ಕಾವಿ ಕಪಿನಿ ಉದ್ದನೆಯ ನಿಲುವಂಗಿ ಹಾಕಿಕೊಂಡು ಕೊರಳಿಗೆ ಘಂಟೆ ರುದ್ರಾಕ್ಷಿಯ ಮಾಲೆ ಕಿವಿಗೆ ಕರ್ಣಕುಂಡಲ ಹಣೆಗೆ ವಿಭೂತಿ ಎರಡೂ ಕೈ ಬೆರಳುಗಳಿಗೆ ಬೆಳ್ಳಿ ಇಲ್ಲವೇ ತಾಮ್ರದ ವಿವಿಧ ನಮೂನೆಯ ಹರಳುಗಳ ಉಂಗುರುಗಳನ್ನು ರಟ್ಟೆಗೆ ಯಕ್ಷಿಣಿ ಹಾಗೂ ರಟ್ಟೆ ಬಳೆಗಳನ್ನು ಧರಿಸುತ್ತಾರೆ. ಕೊರಳಿಗೆ ಕೆಂಪು ನೀಲಿ ಹಾಗೂ ಬಿಳಿ ಬಣ್ಣಗಳ ಮಣಿಸರಗಳನ್ನು ಹಾಕಿಕೊಂಡು ಹಾಗೂ ಕರಡಿ ಉಗುರುಗಳನ್ನು ಮತ್ತು ರಾಘವೇಂದ್ರಸ್ವಾಮಿ ಇಲ್ಲವೆ ಆಂಜನೆಯ ಪದಕಗಳನ್ನು ಈ ಸರಗಳಲ್ಲಿ ಪೋಣಿಸಿ ಕೊಳ್ಳುತ್ತಾರೆ. ಹೆಗಲಿಗೆ ನಾಲ್ಕು ಖಾನೆಗಳುಳ್ಳ ಜೋಳಿಗೆಯಿದ್ದು ಅದನ್ನು ಕಾವಡಿಗಳ ದಬ್ಬ ಬಿದುರುಕೋಲುಕ್ಕೆ ಇಳಿಬಿಟ್ಟಿವುದುಂಟು. ಇದಕ್ಕೆ ಅವರು ರೇವಣ್ಣಸಿದ್ಧನ ಜೋಳಿಗೆ ಎಂದು ಕರೆಯುತ್ತಾರೆ. ಕೈಯಲ್ಲಿ ಶಂಖ, ಬೆತ್ತಗಳನ್ನು ಹಿಡಿದಿರುತ್ತಾರೆ. ತಲೆಗೆ ಬಣ್ಣದ ಪೇಟಾ ಸುತ್ತಿಕೊಂಡು ಮುಡಿಗೆ ವಿಶಿಷ್ಟ ಬಗೆಯ ಹರಳುಗಳನ್ನು ನವಿಲುಗರಿಯ ತುರಾಯಿಗಳನ್ನು ಮುಡಿದುಕೊಂಡು ಜೋಳಿಗೆಗೆ ಗಿಲಗಂಜಿ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಚೆಂಬ(ಕಮಂಡಲ) ವನ್ನು ಹಿಡಿದುಕೊಳ್ಳುತ್ತಾರೆ. ಮೈಯಿಗೆ ಬೂದಿ ಬಳಿದುಕೊಂಡು ನಾಟಕಕ್ಕೆ ಪಾತ್ರ ಸಿದ್ಧವಾಗುವಂತೆ ಭಿಕ್ಷಾಟನೆಗೆ ಸಿದ್ಧರಾಗಿ ಊರು ಪ್ರವೇಶಿಸುತ್ತಾರೆ ( ನಾಯಕ,ಡಿ ಬಿ:೨೦೦೨: ೧೬೯-೧೭೦).

ಮೈಸೂರು ಸುತ್ತಲೂ ನೆಲೆಸಿರುವ ಈ ಸಮುದಾಯದವರನ್ನು ವರ್ಷದಲ್ಲಿ ಮೂರು ಬಾರಿ ಅಂದರೆ ದಸರಾ, ಸಂಕ್ರಾಂತಿ, ಗೌರಿ ಹಬ್ಬಗಳಲ್ಲಿ ಎಂದರೆ ಸೆಪ್ಟಂಬರ್ ನಿಂದ ಅಕ್ಟೋಬರ್, ಜನವರಿಯಿಂದ ಫೆಬ್ರವರಿ ಮತ್ತು ಅಗಸ್ಟ್ ನಿಂದ ಸೆಪ್ಟೆಂಬರ್ ತಿಂಗಳ ಹಬ್ಬಗಳಲ್ಲಿ ಭಾಗವಹಿಸುವರು. ಮೈಸೂರು ದಸರಾ ಹಾಗೂ ಚಾಮುಂಡೇಶ್ವರಿ ಜಾತ್ರೆಗಳಲ್ಲಿ ಇದರೊಂದಿಗೆ ವರ್ಷಕ್ಕೊಮ್ಮೆ ಶಿವಮೊಗ್ಗ, ಹುಬ್ಬಳಿ ಮತ್ತು ಧಾರವಾಡ ಭಾಗಗಳಿಗೂ ಅನುಕೂಲಮಾಡಿಕೊಂಡು ಭಿಕ್ಷಾಟನೆ ಮಾಡುವರು. ಭಿಕ್ಷಾಟನೆಯಿಂದ ಹೆಚ್ಚಿನ ಸಂಪಾದನೆ ಬರುವ ಸ್ಥಳಗಳು ಬಸ್ ಅಥವಾ ರೈಲುಗಳಿಂದ ಪ್ರವಾಸ ಕೈಗೊಂಡು ಭಿಕ್ಷಾಟನೆ ಪಡೆದು ಮರಳಿ ತಮ್ಮ ಸ್ವಂತ ಊರುಗಳಿಗೆ ತಲುಪುವರು. ಹಾಗೆ ಒಂದು ವರ್ಷಕ್ಕೆ ಬೇಕಾಗುವ

ದವಸ ಧಾನ್ಯಗಳನ್ನು ಭಿಕ್ಷಾಟನೆಯಿಂದ ಸಂಗ್ರಹಿಸುತ್ತಾರೆ. ಅಂತಹ ಧಾನ್ಯಗಳನ್ನು ಬೆಳೆಯುವ ವತನದ ಹಳ್ಳಿಗಳನ್ನು ಗುರುತಿಸಿಕೊಂಡು ಭಿಕ್ಷಾಟನೆ ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ತಮ್ಮ ಜೊತೆಗೆ ಕುಟುಂಬದ ಹೆಂಡತಿ, ಮಕ್ಕಳನ್ನಾಗಲಿ ಹಿಂದೆ ಕರೆದುಕೊಂಡು ಹೋಗುವುದಿಲ್ಲ. ಮೈಸೂರು ಸಿದ್ದಪ್ಪಾಜಿ ಗುಡಿ ಇಲ್ಲವೆ ಮರಿಯಮ್ಮನ ಗುಡಿಯ ಪಡವಾರಳ್ಳಿ ಅಥವಾ ಕೇತಮ್ಮನಹಳ್ಳಿಯಲ್ಲಿ ಇದ್ದುಕೊಂಡು ಸುತ್ತ ಊರುಗಳಲ್ಲಿ ಭಿಕ್ಷೆ ಬೇಡುವರು. ಸಿದ್ದಪ್ಪಾಜಿ ಗುಡಿಯನ್ನು ಬ್ರಾಹ್ಮಣರು ಪೂಜಿಸಿವರು. ಹೆಚ್ಚಾಗಿ ಹಿಂದುಳಿದ ಸಮುದಾಯಗಳು ಈ ದೇವರನ್ನು ಬೇಡಿಕೊಂಡು ನಡೆಯುವವರು.ನಿರಂಜಯ್ಯನ ಕಾಯಕ ಕುರಿತ ವಿವರ ಒಂದನೇ ಅಧ್ಯಾಯದಲ್ಲಿ ಹೇಳಿಯಾಗಿದೆ. ಮಾಡುವವರು

ಸಿದ್ಧರ ಕೈಚಳಕದಾಟ

ಭಿಕ್ಷಾಟನೆಯ ಜೊತೆಗೆ ಸಿದ್ಧರ ಕೈಚಳಕದಾಟ ಬಹಳ ಪ್ರಚಲಿತದಲ್ಲಿದೆ. ಸುಡುಗಾಡು ಸಿದ್ದರು ತಮ್ಮ ಕೈಚಳಕದ ಆಟಕ್ಕೆ ಲಾಗ್ಮು ಎಂದು ಕರೆಯುತ್ತಾರೆ. ಇದು ಮನರಂಜನೆಯ ಆಟ. ಉದ್ದೇಶಪೂರ್ಣ ವೇಷಧಾರಿಗಳಾದ ಸಿದ್ಧರು ನೂರಾರು ಜನರ ಎದುರಿಗೆ ತಮ್ಮಲ್ಲಿರುವ ಕೈಚಳಕದ ಉದ್ಯೋಗವನ್ನು ಪ್ರದರ್ಶಿಸುತ್ತಾರೆ. ಆಟಕ್ಕೆ ತಮ್ಮಲ್ಲಿರುವ ಗಜುಗ, ಕಲ್ಲಿನ ಗುಂಡು, ಲಿಂಬೆಹಣ್ಣು, ಅಡಿಕೆ, ನಾಣ್ಯ, ಲಿಂಗ, ಬಸವಣ್ಣ, ಗೊಂಬೆ, ಹಾವಿನ ತಲೆ, ಚೋಳು ಜೋತೆಗೆ ಚಿಗರೆಯ ಚರ್ಮ ಮೊದಲಾದವುಗಳನ್ನು ಜೋಳಿಗೆಯಲ್ಲಿ ಸದಾ ಇರಿಸಿ ಕೊಂಡಿರುತ್ತಾರೆ. ಈ ಆಟಕ್ಕೆ ಸಮಯ ಸಂದರ್ಭ ಏನು ಇರುವುದಿಲ್ಲ. ಸಾಮಾನ್ಯವಾಗಿ ಊರಿನ ಪ್ರಮುಖ ಬೀದಿಗಳಲ್ಲಿ ಜನಸಂದಣಿ ಇರುವ ಸ್ಥಳಗಳನ್ನು ಅವರು ಪ್ರದರ್ಶನಕ್ಕಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ. ಜೋಳಿಗೆಯಿಂದ ಮೇಲೆ ತಿಳಿಸಿದ ಎಲ್ಲ ಸಾಮಾನು ಗಳೊಂದಿಗೆ ಕೈ ಚಳಕದಿಂದ ಗುಂಡು, ಗಜಗ, ನುಂಗಿ ಮೂಗಿನಿಂದ ತೆಗೆಯುವುದು ನಂತರ ಕಿವಿಯಿಂದ ತೆಗೆಯುವುದು ಕರಿಬೀಜಗಳನ್ನು ಅಂಗೈಯಲ್ಲಿ ಹಿಡಿದು ಲಿಂಗಗಳನ್ನು ಮಾಡಿ ತೋರಿಸುವುದು. ಅಂಗೈಯಲ್ಲಿ ಲಿಂಗವನ್ನು ಹಿಡಿದು ಈಶ್ವರ ಮೂರ್ತಿಯನ್ನು ಮಾಡಿ ತೋರಿಸುವುದು. ಬರಿಗೈಯಿಂದ ಚೇಳನ್ನು ತೋರಿಸುವುದು ಹೀಗೆ ಇವರು ಹತ್ತಾರು ಬಗೆಗಳಿಂದ ಪ್ರದರ್ಶನ ನೀಡಿ ನೋಡುಗರನ್ನು ರಂಜಿಸುತ್ತಾರೆ.

ಅಲೆಮಾರಿಗಳಾದ ಇವರು ಕಾಡು ಬೆಟ್ಟಗಳಲ್ಲಿ ಸಂಚರಿಸಿ ಗಿಡಮೂಲಿಕೆಗಳನ್ನು ಸಂಗ್ರಹಿಸಿ ಭಿಕ್ಷಾಟನೆಯ ಜೊತೆಗೆ ನಾಟಿ ವೈದ್ಯರಾಗಿ ಕೆಲಸ ಮಾಡುತ್ತಾರೆ. ಮಕ್ಕಳಿಗೆ ಕಾಯಿಲೆಯಾದಾಗ ಕಾಲದೂಳಿ ತೆಗೆಯುವಾಗ ಕೆಂಡ ಹಾಕುವುದು. ಬಾಲಗ್ರಹ ಯಂತ್ರಕಟ್ಟುವುದು ಮತ್ತು ಸಣ್ಣಪುಟ್ಟ ಕಾಯಿಲೆಗಳಿಗೆ ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಗಳನ್ನು, ಕಣ್ಣು ಬೇನೆಗೆ ಮೂರ್ಚೆ ರೂಗಕ್ಕೆ, ಮೂಲವ್ಯಾದಿಗೆ ಹಾಗೂ ಗಂಡಮಲ್ಲಿಗೆ ಹಾವು, ಚೇಳು ಕಚ್ಚಿದರೆ ಮತ್ತು ಕಾಮಲೆ, ಕಿವಿ ಸೊರುವಿಕೆಗೆ ಹೀಗೆ ಅನೇಕ ಕಾಯಿಲೆಗಳಿಗೆ ತಮ್ಮಲ್ಲಿದ್ದ ಔಷಧದಿಂದ ಗುಣಪಡಿಸುತ್ತಾರೆ. ಸುಡುಗಾಡುಸಿದ್ಧ ಹಾಗೂ ನಿರಂಜಯ್ಯ ಭಿಕ್ಷುಕ ವೃತ್ತಿಗಳನ್ನು ಮೂಲ ಕಸುಬುಗಳನ್ನಾಗಿಸಿಕೊಂಡು ಬಂದಿದ್ದಾರೆ. ಇಂದಿನ ದಿವಸಗಳಲ್ಲಿ ದಾನ ಧರ್ಮಗಳ

ಕುರಿತಾಗಿರುವ ನಂಬಿಕೆ ಕಡಿಮೆಯಾಗುತ್ತಾ ಬಂದಿದ್ದು ಅಲ್ಲದೆ ಈ ಜನರು ತಮ್ಮ ಮೂಲ ವೃತ್ತಿಯನ್ನು ಕಡಿಮೆಗೊಳಿಸಿದ್ದಾರೆ. ಇತ್ತೀಚೆಗೆ ಸರ್ಕಾರವು ಭಿಕ್ಷಾಟನೆ ನಿಷೇಧ ಕಾಯ್ದೆ ತಂದಿರುವುದರಿಂದ ಬಹುತೇಕವಾಗಿ ವೃತ್ತಿಗಳನ್ನು ಮಾಡಲು ಮುಂದೆ ಬರುತ್ತಿಲ್ಲ. ಹೀಗಾಗಿ ತಮ್ಮ ಕುಟುಂಬ ತಮ್ಮ ಮೂಲ ನಿರ್ವಹಣೆಗಾಗಿ ಬೇರೆ ಬೇರೆ ವೃತ್ತಿಗಳನ್ನು ಕೈಗೊಳ್ಳುತ್ತಿದ್ದಾರೆ.

## ವೃತ್ತಿ

ಕರ್ನಾಟಕದಲ್ಲಿಯ ಸುಡುಗಾಡುಸಿದ್ಧರ ಆರ್ಥಿಕ ಸ್ಥಿತಿಗತಿಗಳ ಕುರಿತ ಕ್ಷೇತ್ರಕಾರ್ಯದ ಮಾಹಿತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

### ಕಾಯಕರ್ಹವಲ್ಲದ ವಯೋಗುಂಪು

ಸರ್ಕಾರವು ಸಾಮಾನ್ಯವಾಗಿ ೦-೧೭ರ ವಯೋಮಾನದವರನ್ನು ನೇಮಕಾತಿಗಳಿಗೆ ಅನರ್ಹವೆಂದು ಮತ್ತು ೬೦ ವರ್ಷ ದಾಟಿದವರನ್ನು ವೃದ್ಧರೆಂದು ಪರಿಗಣಿಸಿ ಕಾಯಕರ್ಹವಲ್ಲದ ಗುಂಪೆಂದು ಪರಿಗಣಿಸಿದೆ. ಸುಡುಗಾಡುಸಿದ್ಧರಲ್ಲಿ ೧೭ ವರ್ಷ ಒಳಗಿನವರ ಸಂಖ್ಯೆ ೪೧೦೩. ಹಾಗೆಯೇ ೬೧ ವರ್ಷಕ್ಕಿಂತ ಮೇಲ್ಪಟ್ಟವರ ಸಂಖ್ಯೆ ೩೩೩. ಹೀಗಾಗಿ ಕಾಯಕರ್ಹವಲ್ಲದ ಜನಸಂಖ್ಯೆ ೪೪೩೬ (ಕೋಷ್ಟಕ:೬.೧) ಎಂದು ಪ್ರಸ್ತುತ ಗಣತಿಯಲ್ಲಿ ದಾಖಲಾಗಿದೆ. ಇವರನ್ನು ಅವಲಂಬಿತ ಗುಂಪೆಂದು ಕರೆಯಬಹುದು. ಈ ವಯೋಗುಂಪಿನವರೂ ಒಂದಿಲ್ಲೊಂದು ಕಾಯಕಗಳಲ್ಲಿ ತೊಡಗಿಸಿಕೊಂಡಿರುವುದರಿಂದ ನಿರುದ್ಯೋಗಿಗಳು ಕಾಣಸಿಗರು, ಮತ್ತು ಕಾಯಕರ್ಹರಿಗಿಂತ ಹೆಚ್ಚಿನವರು ಕೆಲಸ ಮಾಡುವುದನ್ನು ಗಮನಿಸಬಹುದು. ಲಿಂಗಭೇದ ಮತ್ತು ವಯೋಭೇಧವಿಲ್ಲದೇ ಇವರು ಭಿಕ್ಷಾಟನೆಯಲ್ಲಿ ತೊಡಗುವುದು ಸಹಜ. (ಕೋಷ್ಟಕ:೬.೩). ಸರಕಾರದ ದೃಷ್ಟಿಯಲ್ಲಿ ಇವರು ಕೈಗೊಂಡಿರುವ ಕಾಯಕಗಳಿಗೆ ಯಾವುದೇ ಮಾನ್ಯತೆಗಳಿರುವುದಿಲ್ಲ.

**ಕೋಷ್ಟಕ: ೬.೧**

**ಸಮೀಕ್ಷೆಗೊಳಪಟ್ಟ ಸುಡುಗಾಡುಸಿದ್ಧರಲ್ಲಿಯ ಆಶ್ರಿತರ ವಯೋಗುಂಪು**

| ವಯೋ ಗುಂಪು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ೦-೧೭ ವರ್ಷ | ೨೨೪೭ | ೧೮೫೬ | ೪೧೦೩ |
| ೬೧ ವರ್ಷ ಮೇಲ್ಪಟ್ಟವರು | ೧೬೫ | ೧೬೮ | ೩೩೩ |
| ಒಟ್ಟು | ೨೪೧೨ | ೨೦೨೪ | ೪೪೩೬ |

### ಸುಡುಗಾಡುರ ಕಾಯಕರ್ಹ ವಯೋಗುಂಪು

೧೮ ರಿಂದ ೬೦ರ ವಯೋಮಾನದೊಳಗಿನವರನ್ನು ಕಾಯಕರ್ಹ ಗುಂಪೆಂದು ಪರಿಗಣಿಸಲಾಗಿದೆ. ಅಂತಹವರು ಸುಡುಗಾಡುಸಿದ್ಧರಲ್ಲಿ ೪೬೮೭ ಜನರಿದ್ದಾರೆ. ಇದರಲ್ಲಿ ಪುರುಷರು ೨೩೪೯ ಮತ್ತು ಮಹಿಳೆಯರು ೨೩೩೮ ಸೇರಿರುವರು (ಕೋಷ್ಟಕ:೬.೨).

**ಕೋಷ್ಟಕ: ೬.೨**

**ಸಮೀಕ್ಷೆಗೊಳಪಟ್ಟ ಸುಡಗಾಡು ಸಿದ್ಧರಲ್ಲಿಯ ಕಾಯಕರ್ಹ ವಯೋಗುಂಪು**

| ವಯೋ ಗುಂಪು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ೧೮-೪೦ ವರ್ಷ | ೧೮೮೬ | ೧೮೭೫ | ೩೬೮೧ |
| ೪೧-೬೦ ವರ್ಷ | ೫೪೩ | ೪೬೩ | ೧೦೦೬ |
| ಒಟ್ಟು | ೨೩೪೯ | ೨೩೩೮ | ೪೬೮೭ |

ಸುಡುಗಾಡುಸಿದ್ಧರಲ್ಲಿಯ ೧೮ ರಿಂದ ೪೦ ವಯೋಗುಂಪಿನವರನ್ನು ವಿಶೇಷವಾಗಿ ಕಾಯಕರ್ಹ ಮತ್ತು ಪ್ರಜನನರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರಲ್ಲಿಯ ವಿವಿಧ ವೃತ್ತಿಗಳನ್ನು ಅವಲಂಬಿಸಿರುವವರು ಹೀಗಿದ್ದಾರೆ. ಇವರಲ್ಲಿ ಇಂದಿಗೂ ಶೇ. ೩೫.೫೬ರಷ್ಟು ಕೃಷಿಕೂಲಿಗಳಾಗಿ ಹಾಗೂ ಶೇ. ೧೭.೬೦ರಷ್ಟು ಜನ ಭಿಕ್ಷಾಟನೆಯಲ್ಲಿ ತೊಡಗಿಸಿ ಕೊಂಡಿರುವುದು ಮತ್ತು ಶೇ. ೧೪.೮೧ ರಷ್ಟು ಜನ ಇತರೆ ಕೆಲಸಗಳಾದ ಕೌದಿ, ಪೊರಕೆ, ದಾರ, ಪಿನ್ನು ಮಾರಾಟ, ಬೇಟೆ, ಮರುಬಳಕೆಗೆ ಬಳಕೆಯಾಗುವ ಹಳೆ ಪ್ಲಾಸ್ಟಿಕ್ ಪೇಪರು, ಬಾಟ್ಲಿ ಚೂರು ಇತ್ಯಾದಿಗಳನ್ನು ಆಯುವುದರಲ್ಲಿ ತೊಡಗಿಸಿಕೊಂಡಿರುವುದು ಇವರ ಆರ್ಥಿಕ ಅಭದ್ರತೆಯನ್ನು ಬೆರಳುಮಾಡಿ ತೋರಿಸುತ್ತದೆ. ಕೃಷಿ, ಕೃಷಿಕೂಲಿ, ಮೀನುಗಾರಿಕೆ, ಸಣ್ಣವ್ಯಾಪಾರ, ಪಶುಸಂಗೋಪನೆ ಕಾಯಕಗಳಲ್ಲಿ ಇತ್ತೀಚೆಗೆ ಅಭಿರುಚಿ ತೋರುತ್ತಿರುವುದು ಸಂತಸದ ಸಂಗತಿ (ಕೋಷ್ಟಕ:೬.೩).

**ಕೋಷ್ಟಕ: ೬.೩ ಕೆಲಸಗಳಲ್ಲಿ ತೊಡಗಿಕೊಂಡಿರುವವರ ಸುಡುಗಾಡುಸಿದ್ಧರ ಪ್ರಮಾಣ**

| ಸಂ. | ಕಾಯಕಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧ | ಕೃಷಿ | ೧೬೦ | ೨೦ | ೧೮೦ |
| ೨ | ಕೃಷಿಕೂಲಿ | ೭೦೦ | ೫೦೦ | ೧೨೦೦ |
| ೩ | ಸರ್ಕಾರಿ ನೌಕರರು | ೪೫೦ | ೨೫೦ | ೭೦೦ |
| ೪ | ಸಣ್ಣ ವ್ಯಾಪಾರ | ೧೫೦ | ೫೦ | ೨೦೦ |
| ೫ | ಧಾರ್ಮಿಕ ಭಿಕ್ಷಾಟನೆ | ೫೮೯ | ೫ | ೫೯೪ |
| ೬ | ಇತರೆ ಕೆಲಸ | ೨೦೦ | ೩೦೦ | ೫೦೦ |
| | ಒಟ್ಟು | ೨೨೪೯ | ೧೧೨೫ | ೩೩೭೪ |
| | ನಿರುದ್ಯೋಗಿಗಳು | ೧೦೦ | ೬೧೫ | ೭೧೫ |

**ಪಶುಸಂಗೋಪನೆ**

ಸುಡುಗಾಡುಸಿದ್ಧರು ಅಲೆಮಾರಿಗಳಾದುದರಿಂದ ಮೊದಲಿಗೆ ಊರಿಂದೂರಿಗೆ ತಮ್ಮ ಸರಕುಗಳನ್ನು ಸಾಗಿಸುವ ಉದ್ದೇಶದಿಂದ ದನಗಳನ್ನು ಸಾಕುತ್ತಿದ್ದರಂತೆ, ಬಹುಪಾಲು

ಸುಡುಗಾಡುಸಿದ್ಧರ ಕುಟುಂಬಗಳು ಒಂದು ಕಡೆ ನೆಲೆ ನಿಂತಿವೆ. ಭಿಕ್ಷಾಟನೆ ಇತ್ಯಾದಿಗಳನ್ನು ನಡೆಸಿದರೂ ತಾವು ನೆಲೆನಿಂತ ಪ್ರದೇಶದ ಆಸುಪಾಸಿನಲ್ಲಿಯೇ ಪಶುಪಾಲನೆ ಮಾಡುತ್ತಾರೆ. ಹೀಗಾಗಿ ಇತ್ತೀಚೆಗೆ ಕುರಿ, ಮೇಕೆ ಇತ್ಯಾದಿಗಳನ್ನು ಕೆಲವರು ಸಾಕುತ್ತಿದ್ದಾರೆ. ಈ ಸಾಕಣಿಕೆ ದೊಡ್ಡ ಪ್ರಮಾಣದಲ್ಲಿರದೆ ತುಂಬಾ ಚಿಕ್ಕ ಪ್ರಮಾಣದಲ್ಲಿದೆ(ಕೋಷ್ಟಕ:೭.೪).

**ಕೋಷ್ಟಕ: ೭.೪**

**ಸಮೀಕ್ಷೆಗೊಳಪಟ್ಟ ಕರ್ನಾಟಕದಲ್ಲಿ ಸುಡುಗಾಡುಸಿದ್ಧರ ಪಶು ಸಂಪತ್ತು**

| ಸಂ. | ಪಶುಗಳು | ಸಂಖ್ಯೆ |
|---|---|---|
| ೧ | ಎತ್ತು | ೭೫ |
| ೨ | ಆಕಳು | ೭೫ |
| ೩ | ಎಮ್ಮೆ | ೩೭ |
| ೪ | ಕುರಿ | ೪೯ |
| ೫ | ಮೇಕೆ | ೫೮ |
| ೬ | ಹಂದಿ | ೩ |
| ೭ | ಕೋಳಿ | ೨೯೨ |
| ೮ | ಕೌಜುಗ | ೫೬ |

ಸಾಮಾನ್ಯವಾಗಿ ಮೇಕೆ, ಕುರಿಯಂತಹ ಪ್ರಾಣಿಗಳನ್ನು ಸಾಕಲು ಇವರಲ್ಲಿಯ ವೃದ್ಧರೂ ಹಾಗೂ ಮಕ್ಕಳು ಸಹಾಯಕವಾಗಿದ್ದಾರೆ.

**ಬಳಸುವ ಉಪಕರಣಗಳು, ಕುಟುಂಬ ನಿರ್ವಹಣೆ**

ಗುಡಿಸಲಿನಲ್ಲಿ ತಮಗೆ ಕುಟುಂಬಕ್ಕೆ ಬೇಕಾಗುವ ಅತಿ ಅವಶ್ಯಕ ವಸ್ತುಗಳನ್ನು ಇಟ್ಟುಕೊಳ್ಳುವರು. ಅಡಿಗೆ ಮಾಡುವಾಗ ಲೋಹದ ಪಾತ್ರೆಗಳನ್ನು ಬಳಸುವುದು ಅಪರೂಪ. ಅಡಿಗೆಯ ಮಾಡುವ ಸಲುವಾಗಿ ಮಣ್ಣಿನ ಪಾತ್ರೆಗಳು, ಮಡಿಕೆ, ಕುಡಿಕೆ ಬಳಸುತ್ತಾರೆ. ನೀರಿನ ಸಂಗ್ರಹಣೆಗಾಗಿ ಗಡಿಗೆ ಬಳಸುತ್ತಾರೆ. ಊಟ ಮಾಡಲು ಮಣ್ಣಿನ ತಟ್ಟೆ ಬಳಸುತ್ತಾರೆ. ನೀರು ಕುಡಿಯಲು ಮಣ್ಣಿನ ಮಗಿ ಮತ್ತು ತಂಬೂರಿ ಕಾಯಿಯಿಂದ ತಯಾರಿಸಿದ ತರಟೆ ಬಳಸುವುದುಂಟು. ಮತ್ತು ಪಲ್ಲೆ ಸಾರಿಗಾಗಿ ತೆಂಗಿನ ಚಿಪ್ಪಿನಿಂದ ತಯಾರಿಸಿದ ಸೌಟನ್ನು ಉಪಯೋಗಿಸುವರು. ಹಾಗೆಯೇ ಮೆಣಸಿನಕಾಯಿ ಮಸಾಲೆ ಸಾಮಾನುಗಳನ್ನು ಅರೆಯಲು ಗುಂಡಸಿಪ್ಪ ಬಳಸುತ್ತಾರೆ. ಇದು ಇವರಿಗೆ ಸಂಚರಿಸುವಾಗ ತುಂಬಾ ಉಪಯೋಗ ಹೀಗಾಗಿ ಎಲ್ಲಾ ಕುಟುಂಬಗಳು ಇದನ್ನು ಇಟ್ಟುಕೊಂಡು ಬಳಸುತ್ತಾರೆ.

ಬಿದುರಿನಿಂದ ತಯಾರಿಸಿದ ಮಂಚವನ್ನು ತಮ್ಮ ಸಾಮಾನು ಸರಂಜಾಮುವನ್ನು ಗುಡಾರದಲ್ಲಿಟ್ಟುಕೊಳ್ಳಲು ಇದನ್ನು ಉಪಯೋಗಿಸುತ್ತಾರೆ. ಗುಡಿಸಿಲಿನ ಒಳಭಾಗದಲ್ಲಿ ಇದನ್ನು ಇಡಲು ವ್ಯವಸ್ಥೆ ಮಾಡಿರುತ್ತಾರೆ. ಅಲ್ಲದೆ ಗುಡಿಸಲಿನ ಮುಂಭಾಗದ ಬಯಲಿನಲ್ಲಿ

ಸಾಕು ಪ್ರಾಣಿಗಳನ್ನು ಕಟ್ಟಿ ಹಾಕಲು ಗುಟಗಳನ್ನು ನೆಟ್ಟಿರುತ್ತಾರೆ. ಇವರು ದನಕರು, ಕುದುರೆ, ನಾಯಿ, ಆಡು, ಬೆಕ್ಕು ಮುಂತಾದ ಪ್ರಾಣಿಗಳನ್ನು ಸಾಕುವುದುಂಟು. ಈಚಲು ಗರಿಗಳಿಂದ ತಯಾರಿಸಿದ ಚಾಪೆ ಕೌದಿ ಅನುಕೂಲಸ್ಥರು ಕಂಬಳಿಗಳನ್ನು ಹಾಸಲು ಮತ್ತು ಹೊದೆಯಲು ಉಪಯೋಗಿಸುವುದುಂಟು. ಮಳೆಗಾಲವಿರಲಿ, ಚಳಿಗಾಲವಿರಲಿ ಗುಡಾರಗಳಲ್ಲಿ ಜೀವನ ಸಾಗಿಸುತ್ತಾರೆ.

ಇತ್ತೀಚೆಗೆ ಇವರು ಅಲೆಮಾರಿತನದ ಬದುಕನ್ನು ನಿಲ್ಲಿಸಿ ತಮಗೆ ಅನುಕೂಲವಾದ ಗ್ರಾಮಗಳನ್ನು ನೋಡಿಕೊಂಡು ಗುಂಪು ಕುಟುಂಬಗಳೊಂದಿಗೆ ಒಂದಡೆ ನೆಲೆಸುತ್ತಿದ್ದಾರೆ. ಮೇಲೆ ತಿಳಿಸಿದ ಗೃಹಬಳಕೆಯ ವಸ್ತುಗಳಲ್ಲಿ ಮಾರ್ಪಾಡುವಾಗಿ ಕಲ್ಲು ಮಣ್ಣಿನಿಂದ ಮನೆಗಳನ್ನು ಕಟ್ಟಿಸಿಕೊಂಡು ವಾಸದ ಮನೆಯ ಮುಂದೆ ದನಕರುಗಳಿಗೆ ಸಾಕು ಪ್ರಾಣಿಗಳಿಗೂ ಪ್ರತ್ಯೇಕ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಅಲ್ಲದೆ ಸರ್ಕಾರದಿಂದ ಕೊಡ ಮಾಡಿದ ಆಶ್ರಯ ಯೋಜನೆಯಲ್ಲಿ ಬಹುತೇಕ ಕುಟುಂಬಗಳು ಮನೆಗಳನ್ನು ಪಡೆದಿದ್ದಾರೆ.

**ಕುಟುಂಬದ ನಿರ್ವಹಣೆ :** ಕರ್ನಾಟಕದಲ್ಲಿ ಬಹುತೇಕ ಜಿಲ್ಲೆಯಲ್ಲಿ ವಾಸವಾಗಿದ್ದು ಭಿಕ್ಷಾಟನೆಯ ಬದುಕನ್ನು ಸಾಗಿಸುತ್ತಾ ಬಂದಿದ್ದರೂ ಕೆಲವರು ತಮ್ಮ ಕುಟುಂಬದ ನಿರ್ವಹಣೆಗಾಗಿ ಸಣ್ಣಪುಟ್ಟ ವ್ಯಾಪಾರ, ಕೃಷಿ, ಕೂಲಿ, ತುಂಡು ಭೂಮಿಗಳನ್ನು ಹೊಂದಿ ವ್ಯವಸಾಯ ಮಾಡುತ್ತಿದ್ದಾರೆ. ಅಲ್ಲದೆ ಹೆಣ್ಣು ಮಕ್ಕಳು ಮನೆಯ ಕೆಲಸದ ಜೊತೆ ಚಾಪೆ ಹೆಣೆಯುವುದು ಕೌದಿ ಹೊಲಿಯುವುದು ಕುಟುಂಬ ನಿರ್ವಹಣೆಯಲ್ಲಿ ಪಾಲುದಾರರಾಗಿದ್ದಾರೆ.

## ಕಸುಬಿನ ಬಗೆಗೆ ನಂಬಿಕೆಗಳು

ಕಸುಬಿನ ಬಗ್ಗೆ ಅಪಾರ ನಂಬಿಕೆಯುಳ್ಳವರು ಭಿಕ್ಷೆ ಎಂದರೆ ಲಕ್ಷ್ಮ ದೇವರು ಕೊಟ್ಟ ಜೋಳಿಗೆ. ಹಾಗಾಗಿ ಕುಲಕಸುಬಾದ ಭಿಕ್ಷಾವೃತ್ತಿಯನ್ನು ಪಾರಂಪರಿಕವಾಗಿ ಮುಂದುವರೆಸಿ ಕೊಂಡು ಬಂದಿದ್ದಾರೆ. ಸರ್ಕಾರವು ಭಿಕ್ಷಾಟನೆ ನಿಷೇಧ ಕಾಯ್ದೆಯನ್ನು ತಂದಿರುವುದರಿಂದ ಹಾಗೂ ಜನರಲ್ಲಿ ದಾನ ಧರ್ಮಗಳ ನಂಬಿಕೆ ಕಡಿಮೆಯಾಗಿರುವುದರಿಂದ ಸರಿಯಾದ ಭಿಕ್ಷೆ ದೊರೆಯದೆ ತಮ್ಮ ಕುಲಕಸಬುಗಳನ್ನು ತೊರೆದು ಬೇರೆ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಹೀಗಾಗಿ ತಮ್ಮ ಕಸುಬಿನ ಬಗ್ಗೆ ನಂಬಿಕೆಗಳು ಕಡಿಮೆಯಾಗಿವೆ. ಹೀಗೆ ಕುಟುಂಬಗಳ ಜೀವನೋಪಾಯ ತೊಂದರೆದಾಯಕವಾಗಿದ್ದು ಹೊಟ್ಟೆ ತುಂಬಿಸಿಕೊಳ್ಳಲು ಕುಟುಂಬದ ಪ್ರತಿಯೊಬ್ಬ ಸದಸ್ಯರು ಹೋರಾಟ ಮಾಡಿ ಬದುಕಬೇಕಾಗಿದೆ.

## ಬೇಟೆ

ಮಾಂಸಹಾರಿಗಳಾದ ಸುಡುಗಾಡು ಸಿದ್ದರು ಭಿಕ್ಷಾಟನೆಯ ನಂತರ ಬೀಡುವಿನ ವೇಳೆಯಲ್ಲಿ ಪ್ರತಿ ಕುಟುಂಬದಲ್ಲಿ ಒಬ್ಬರಂತೆ ಬೇಟೆಗೆ ಗುಂಪಾಗಿ ಹೋಗುತ್ತಾರೆ. ಮೀನಿನ ಬೇಟೆ, ಹಕ್ಕಿಯ ಬೇಟೆ, ಮೊಲದ ಬೇಟೆ, ನರಿಬೇಟೆ ಹೀಗೆ ಹಲವಾರು ಪ್ರಾಣಿಗಳ ಬೇಟೆಯನ್ನು ಆಡುವರು. ಅಲ್ಲದೆ ಸಾಕು ಪ್ರಾಣಿಗಳ ಸಹಾಯದಿಂದ ಬೇಟೆಯಾಡುತ್ತಾರೆ. ಉದಾಹರಣೆಗೆ ಕೌಜಗ ಮತ್ತು ನಾಯಿ. ಸಾಕಿದ ಕೌಜಗದ ಸಹಾಯದಿಂದ ಅಡವಿಯಲ್ಲಿರುವ ಕೌಜಗಳನ್ನು

ಹಿಡಿಯುತ್ತಾರೆ. ತಾವೇ ತಯಾರಿಸಿದ ಬಲೆ, ಪಾಚಿ ಸಹಾಯದಿಂದ ಜೀವಂತವಾಗಿ ಪಕ್ಷಿಗಳನ್ನು ಹಿಡಿಯುತ್ತಾರೆ. ಬೇಟೆಯಾಡಿ ತಂದ ಪ್ರಾಣಿಗಳ ಮಾಂಸವನ್ನು ಪಾಲು ಮಾಡಿ ಹಂಚಿಕೊಂಡು ತಿನ್ನುತ್ತಾರೆ. ಇತ್ತೀಚಿನ ದಿನಗಳಲ್ಲಿ ಇವರಲ್ಲಿ ಬೇಟೆಯಾಡುವುದು ಕಡಿಮೆಯಾಗುತ್ತಿದೆ. ಕಾರಣ ಸರ್ಕಾರದವರು ಪ್ರಾಣಿಗಳನ್ನು ಹತ್ಯೆ ಮಾಡುವುದು ಅಲ್ಲದೆ ಪ್ರಾಣಿಗಳನ್ನು ಸಾಕುವುದು ಅಪರಾಧವೆಂದು ಕಾನೂನು ಮಾಡಿರುವುದರಿಂದ ಬೇಟೆಯಾಡುವುದು ಕಡಿಮೆಯಾಗಿದೆ.

### ಪಶುಪಾಲನೆ

ಈ ಸಮುದಾಯದವರು ಮೊದಲನಿಂದಲೂ ಭಿಕ್ಷಾಟನೆಯ ಸಮಯದಲ್ಲಿ ಪ್ರಾಣಿಗಳ ಸಹಾಯದಿಂದ ಊರಿಂದ ಊರಿಗೆ ಅಲೆದಾಡುತ್ತಿದ್ದರು. ಅಲೆದಾಡುವ ಸಮಯದಲ್ಲಿ ತಮ್ಮ ಸಮಾನುಗಳನ್ನು ಅವುಗಳ ಮೇಲೆ ಹೇರಿಕೊಂಡು ಹೋಗುತ್ತಿದ್ದರು. ಕಾರಣ ಆಕಳು ಮತ್ತು ಕುದುರೆ ಹಾಗೂ ಜೊತೆಗೆ ಕುರಿ ಕೋಳಿಗಳನ್ನು ಸಾಕುತ್ತಿದ್ದರು. ಅನೇಕ ಕುಟುಂಬಗಳು ಅಲೆದಾಡುವುದನ್ನು ನಿಲ್ಲಿಸಿದ ಕಾರಣ ತಮಗೆ ಅನುಕೂಲವಾದ ಸ್ಥಳಗಳನ್ನು ಗುರುತಿಸಿಕೊಂಡು ನೆಲಸಿದ್ದಾರೆ. ಹೀಗಾಗಿ ಆಕಳು ಎಮ್ಮೆ ಕುರಿ ಕೋಳಿ ಮೇಕೆ ಇವುಗಳನ್ನು ಹೆಚ್ಚಿನ ಪ್ರಮಾಣ ದಲ್ಲಿ ಸಾಕಿದ್ದಾರೆ. ಹಾಗೂ ಸರ್ಕಾರ ಮತ್ತು ಬ್ಯಾಂಕುಗಳಿಂದ ಸಾಲಪಡೆದು ಆಕಳು ಮತ್ತು ಎಮ್ಮೆ ಸಾಕುತ್ತಿದ್ದಾರೆ. ಹೀಗಾಗಿ ಪಶುಸಂಗೋಪನೆ ಯಿಂದ ಇವರ ಕುಟುಂಬದ ನಿರ್ವಹಣೆ ಹಾಗೂ ಆರ್ಥಿಕಸ್ಥಿತಿ ಸುಧಾರಿಸತೊಡಗಿದೆ.

### ಆಹಾರ ಸಂಗ್ರಹಣೆ

ಭಿಕ್ಷಾಟನೆಯಿಂದ ದವಸಧಾನ್ಯಗಳನ್ನು ಸಂಗ್ರಹಿಸಿ ದಾಸ್ತಾನು ಮಾಡುತ್ತಿದ್ದರು ಮತ್ತು ಪ್ರಾದೇಶಿಕವಾಗಿ ಅಲ್ಲಿ ಬೆಳೆದ ಜೋಳ, ರಾಗಿ, ಭತ್ತ, ನವಣೆ ಉಪಯೋಗಿಸುತ್ತಾರೆ. ಅಲ್ಲಲ್ಲಿ ತುಂಡು ಭೂಮಿ ಹೊಂದಿದ್ದ ಇವರು ಈ ಬೆಳೆಗಳನ್ನು ಬೆಳೆಯುತ್ತಾರೆ. ಇವರು ಮಾಂಸಹಾರಿ ಗಳಾಗಿರುವುದರಿಂದ ಬೇಟೆಯಾಡಿ ಬಂದ ಮಾಂಸವನ್ನು ಸೇವಿಸುತ್ತಾರೆ. ಇವರು ಮಿಶ್ರಹಾರಿ ಗಳು ಅಲೆಮಾರಿಗಳಾಗಿರುವವರು ಹೆಚ್ಚು ದವಸ ಧಾನ್ಯಗಳನ್ನು ದಾಸ್ತಾನು ಮಾಡುವುದಿಲ್ಲ. ಕಾರಣ ಸಂಚಾರದ ಸಮಯದಲ್ಲಿ ಸಾಗಾಣಿಕೆ ಅನಾನುಕೂಲವಾಗುವುದರಿಂದ ಭಿಕ್ಷೆಯಿಂದ ಬಂದ ಧಾನ್ಯಗಳ ಮೇಲೆ ಅವಲಂಬಿತರಾಗಿರುತ್ತಾರೆ. ನಂತರ ಇವರು ಕೃಷಿಕೂಲಿ ಮತ್ತು ಭೂಮಿಸಾಗುವಳಿಕೆಯಿಂದ ಬೆಳೆದ ದವಸಧಾನ್ಯಗಳನ್ನು ತಮ್ಮ ಕುಟುಂಬದ ನಿರ್ವಹಣೆಗಾಗಿ ಸಂಗ್ರಹಿಸುತ್ತಾರೆ.

### ಇತರ ಕಸುಬುಗಳು

ಸುಡುಗಾಡುಸಿದ್ದರು ಕುಲ ಕಸುಬನ್ನು ಕಡಿಮೆಗೊಳಿಸಿ ಅಲೆಮಾರಿ ಜೀವನ ತ್ಯಜಿಸಿ ಒಂದುಕಡೆ ವಾಸವಾಗಿದ್ದು ಕುಟುಂಬದ ನಿರ್ವಹಣೆಗಾಗಿ ಕೃಷಿಕೂಲಿ, ಪ್ಲಾಸ್ಟಿಕ್ ಸಾಮಾನು ಗಳನ್ನು ಮಾರುವುದು ಫೋಟೊಗಳಿಗೆ ಕಟ್ಟು ಹಾಕುವುದು, ಕ್ಯಾಲೆಂಡರ್ ಮಾರಾಟ ಮಾಡುವುದು. ಅಲ್ಲದೇ ಹೆಣ್ಣು ಮಕ್ಕಳು ಮನೆಯ ಕೆಲಸದ ಜೊತೆಗೆ ಚಾಪೆ ಹೆಣೆಯುವುದು ಕೌದಿ ಹೊಲಿಯುವುದು ಮಾಡುತ್ತಾರೆ. ಹೀಗೆ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

# ೬

# ಸಾಹಿತ್ಯ ಮತ್ತು ಭಾಷೆ

ಆಂಧ್ರಪ್ರದೇಶದವರಾದ ಸುಡುಗಾಡುಸಿದ್ದರು ಮಾತನಾಡುವ ಭಾಷೆ ತೆಲಗು ಆಗಿರುವುದರಿಂದ ಭಾಷೆ ಮತ್ತು ಸಾಹಿತ್ಯ ದೃಷ್ಟಿಯಿಂದ ತೆಲುಗಿನಲ್ಲಿ ದೊರೆಯುತ್ತಿರುವ ಮೊದಲು ಸಾಹಿತ್ಯ ಕೃತಿ ಕ್ರಿ ಶ ೧೧ನೆಯ ಶತಮಾನದ ಆದಿಕಾಲದಲ್ಲಿದ್ದ ನನ್ನಯ ಭಟ್ಟನೆ ಮಹಾಭಾರತ ಮತ್ತು ಆಂಧ್ರ ಶಬ್ದಚಿಂತಾಮಣಿ ರಚಿಸಿದರು. ಆದರೆ ಅವುಗಳ ಮುಂಚೆಯೆ ತೆಲುಗಿನಲ್ಲಿ ಪದ್ಯ ರಚನೆಯಾಗಿವೆ. ಸುಡುಗಾಡು ಸಿದ್ಧರ ಆಚಾರ ವಿಚಾರ ಅವರ ಬದುಕು ಜೀವನ ಸಾಧನೆಗಳಲ್ಲಿ ಅಡಕವಾಗಿದೆ. ಅವರ ಸಂಪ್ರದಾಯದ ಹಾಡುಗಳು, ಮದುವೆ ಸೋಬಾನ, ಹಬ್ಬಹರಿದಿನಗಳಲ್ಲಿ ಹಾಡುವ ಹಾಡುಗಳು, ಒಗಟು, ಒಡಪುಗಳಲ್ಲಿ ಅವರ ರೀತಿ-ನೀತಿ ಮತ್ತು ವಿಧಿ ನಿಯಮಗಳು ಅಡಕವಾಗಿವೆ.

ಸುಡುಗಾಡುಸಿದ್ಧರ ಸಮಗ್ರ ಸಾಹಿತ್ಯವನ್ನು ಈ ರೀತಿಯಲ್ಲಿ ವಿಂಗಡಿಸಲಾಗಿದೆ.

೧. **ಸಂಪ್ರದಾಯ ಹಾಡುಗಳು:** ಅಮವಾಸೆ, ಹುಣ್ಣಿಮೆ, ಹಬ್ಬ-ಹರಿದಿನಗಳಲ್ಲಿ, ಜಾತ್ರೆ, ಉತ್ಸವ, ಮದುವೆ ಸೋಬಾನ ಸಂದರ್ಭದಲ್ಲಿಯ ಸಾಹಿತ್ಯ.

೨. **ಕಥೆಗಳು:** ಪ್ರಾಣಿಕಥೆಗಳು, ಪುರಾಣ ಕಥೆಗಳು, ನೀತಿ ಕಥೆಗಳು, ಪರಿಸರದ ಕಥೆಗಳು.

೩. **ಗಾದೆಗಳು:** ಭಿಕ್ಷಾಟನೆ ಸಮಯದಲ್ಲಿ ಬಳಸುವ ಗಾದೆಗಳು, ಸಾಮಾಜಿಕ ಗಾದೆಗಳು, ನ್ಯಾಯ ನಿರ್ಣಯ, ನೀತಿ ಪ್ರಧಾನ ಗಾದೆಗಳು.

೪. **ಒಗಟುಗಳು:** ಮಾನವ ಮತ್ತು ಪ್ರಾಣಿಗಳಿಗೆ, ನಿತ್ಯ ಉಪಯೋಗಿಸುವ ಒಗಟುಗಳು.

೫. **ಒಡಪುಗಳು:** ಮದುವೆ, ಸೋಬಾನ ಮತ್ತು ದೇವತಾರಾಧನೆಗಳಲ್ಲಿ ಆರುತಿಯನ್ನು ಬೆಳಗುವಾಗ ವಿಶೇಷವಾಗಿ ಒಡಪುಗಳನ್ನು ಉಪಯೋಗಿಸುತ್ತಾರೆ. ಇವರಲ್ಲಿ ಹೆಂಗಸರ ಒಡಪುಗಳು ಗಂಡಸರ ಒಡಪುಗಳು ಎಂದು ಬೇರೆ ಬೇರೆಯಾಗಿ ಹೇಳಲಾಗಿದೆ.

**ಕಥೆಗಳು**

ಜನಪದ ಸಾಹಿತ್ಯದ ಪ್ರಕಾರಗಳಲ್ಲಿಯೇ ಜನಪದ ಕಥೆಗಳು ಪ್ರಮುಖ ಸ್ಥಾನಗಳಿಸಿವೆ. ಅವುಗಳು ಸಮುದಾಯದ ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತದೆ. ಇಂತಹ ಕಥೆಗಳ ಮೂಲಕ ಆ ಸಮುದಾಯದ ಜೀವನ ವಿಧಾನ ಪರಂಪರೆ ಅವರಲ್ಲಿರುವ

ಸಂಸ್ಕೃತಿ ನಾಗರಿಕತೆಗಳ ಬಗ್ಗೆ ಗುರುತಿಸಬಹುದು. ಮಾನವನ ಸಮಾಜ, ಸಂಸ್ಕೃತಿ ನಾಗರಿಕತೆ ಗಳ ಬಗ್ಗೆ ಅಧಿಕ ಪುರಾವೆಗಳನ್ನು ಒದಗಿಸಬಲ್ಲವು. ಇದು ಕೇವಲ ಸಾಹಿತ್ಯ ಪ್ರಕಾರವಾಗಿರದೆ ಪ್ರಾಮಾಣಿಕ ವಿಜ್ಞಾನವಾಗಿದೆ(ಖಂಡೋಬಾ, ಪಿ ಕೆ:೧೯೯೧:೨೨೧). ಕಥೆಗಳು ಮನೋರಂಜನೆ, ಉಲ್ಲಾಸ ನೀಡಿದರೆ ಇನ್ನೊಂದು ದೃಷ್ಟಿಯಲ್ಲಿ ಆ ಸಮುದಾಯದ ಸಾಮಾಜಿಕ ರೀತಿ ನೀತಿ, ಭಾಷೆ ಮತ್ತು ಸಂಪ್ರದಾಯಗಳನ್ನು ಪರೋಕ್ಷವಾಗಿ ತಿಳಿಸಬಲ್ಲವು.

ಜನಪದ ಕಥೆಗಳಲ್ಲಿ ವರ್ಗೀಕರಣದ ವಿಷಯವನ್ನು ಹಲವಾರು ವಿದ್ವಾಂಸರು ತಮಗೆ ತಿಳಿದ ರೀತಿಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಜಾನಪದ ವಿದ್ವಾಂಸರಲ್ಲಿ ಅಗ್ರಗಣ್ಯರಾದ ಸ್ಮಿಥ್ ಥಾಂರಿಸನ್‌ರ ವರ್ಗೀಕರಣ ಸೂಕ್ತವೆನಿಸುತ್ತದೆ(ಅದೇ:೨೨೨).

ಈ ಹಿನ್ನೆಲೆಯಲ್ಲಿ ಸುಡುಗಾಡುಸಿದ್ಧರ ಜನಪದ ಕಥೆಗಳನ್ನು ಈ ರೀತಿ ವರ್ಗೀಕರಿಸಿ ಕೊಳ್ಳಲಾಗಿದೆ. ೧. ಅದ್ಭುತ ಕಥೆಗಳು ೨. ನೀತಿ ಕಥೆಗಳು ೩. ಪ್ರಾಣಿಕಥೆಗಳು ೪. ನ್ಯಾಯದ ಕಥೆಗಳು ೫. ಪರಿಸರದ ಕಥೆಗಳು ೬. ಪುರಾಣದ ಕಥೆಗಳು.

## ಕಾವ್ಯ

ಸುಡುಗಾಡು ಸಿದ್ಧರ ಆಚಾರ ವಿಚಾರ ಅವರ ಬದುಕು ಜೀವನ ಸಾಧನೆಗಳನ್ನು ನೋಡಲಾಗಿ ಅವರಲ್ಲಿರುವ ಸಂಪ್ರದಾಯದ ಹಾಡುಗಳು ಮದುವೆ ಸಮಾರಂಭದಲ್ಲಿ ಹಾಡುವ ಪದಗಳು ಸೋಬಾನ, ಹಬ್ಬ ಹರಿದಿನಗಲ್ಲಿ ಹಾಡುವ ಹಾಡುಗಳು ಒಗಟು, ಒಡಪುಗಳು ಅವರ ರೀತಿನೀತಿ ಮತ್ತು ವಿಧಿ ನಿಯಮಗಳು ಈ ಹಾಡುಗಳಲ್ಲಿ ಸೇರಿಕೊಂಡಿವೆ. ಅವರಲ್ಲಿರುವ ಸಾಹಿತ್ಯವನ್ನು ಈ ಕೆಳಗಿನಂತೆ ಭಾಗಗಳನ್ನು ಮಾಡಲಾಗಿದೆ.

**ಸಂಪ್ರದಾಯದ ಹಾಡುಗಳು:** ಈ ಸಮುದಾಯದಲ್ಲಿ ಗ್ರಾಮೀಣದಲ್ಲಿ ನೆಲೆಸಿದಾಗ ಅಮವಾಸ್ಯೆ, ಹುಣ್ಣಿಮೆ ಹಬ್ಬಹರಿದಿನ, ಜಾತ್ರೆ ಉತ್ಸವಗಳನ್ನು ಆಚರಿಸುತ್ತಿದ್ದು ಅಲ್ಲದೆ ಮದುವೆ ಸೋಬಾನ ಕಾರ್ಯಗಳಲ್ಲಿ ನಡೆಸುವಾಗ ಅವರು ಅನೇಕ ಸಂಪ್ರದಾಯ ಹಾಡುಗಳನ್ನು ಹಾಡುತ್ತಾರೆ. ಇವರಲ್ಲಿ ಹೆಂಗಸರ ಸಂಪ್ರದಾಯ ಹಾಡುಗಳು ಹೆಂಗಸರ ಸಂಪ್ರದಾಯ ಹಾಡುಗಳಿವೆ.

**ಬಿಸುವ ಹಾಡು:** ಇವರು ಬಿಸುವಾಗ ಮತ್ತು ಕುಟ್ಟುವ ಕಲ್ಲುಗಳನ್ನು ಕೊಟ್ಟು ಮನೆಯ ಒಡತಿಯ ಮನವನ್ನು ತಣಿಸಲು ಅನೇಕ ಹಾಡು ಹಾಡುತ್ತಾರೆ.

ಕುಸನೂರ ಊರಾಗ ತಂಗಿ |
ಬೀಸರಿ ಎನ್ನ ಜೋಳ | ತಂಗಿ
ಕುಸನೂರ ಊರಾಗ
ಗೌರಮ್ಮನ ಕಟ್ಟೆಮ್ಯಾಲ ತಂಗಿ |
ಬಿದ್ದಾವ ಎಡ್ಡ ಸೇರೆ | ತಂಗಿ
ಬೀಸರಿ ಎನ್ನ ಜೋಳ
ಬೀಸಕ್ಕಲ್ಲ ಮ್ಯಾಲ, ತಂಗಿ |

ಹಾಡಗೋಳು ಅವಯೇನೇ | ತಂಗಿ

ಬೀಸದು ಕಲ್ಲು ಮೇಲೆ ಹಾಡೋದು ಪದಗಳೆ

**ಲಾಲಿ ಜೋಗುಳ ಹಾಡುಗಳು:** ಗುಡಿಸಲಲ್ಲಿ ಅಡ್ಡವಾಗಿ ಕೌದಿ ಜೋಳಿಗೆಯನ್ನು ಕಟ್ಟಿ ಮಗುವನ್ನು ಮಲಗಿಸಲು ಲಾಲಿ ಹಾಡು ಹಾಡುತ್ತಾರೆ.

ಬಾಳಿಯ ಬನದಾಗ ಬಾಲಾನ ತೊಟ್ಟಿಲ್ಲ ಕಟ್ಟಿ

ಬಾಲ್ಯಾರು ತೂಗಿದರ ಮನಗುವಲ್ಲಿ ಪರಶುರಾಮ

ಜೋ ಜೋ ರಾಮ ಮಗ ಬಾಬ್ರುವಾಹನ

**ಹಾಸ್ಯ ಗೀತೆಗಳು:** ಸಮಯ ಕಳೆಯಲು ಹಾಸ್ಯ ಚಟಾಕಿಗಳನ್ನು ಹಾರಿಸುತ್ತಾರೆ.

ದಸರಿ ಹಬ್ಬಕ್ಕ ಹಸನಾದ ಹೋಳಗಿ

ಮಾಡು ಎಂದೆನಲ್ಲೆ | ಕೇಳೆ

ಜಾಣೆ ಮಾಡು ಎಂದನಲ್ಲೆ

ಹದನಾದ ಹೋಳಿಗಿ ಬೆಲ್ಲ ಹಾಕಲಿಕ್ಕೆ

ನೆನಪೆ ಬರಲಿಲ್ಲೆ || ಇತ್ಯಾದಿ

**ಪ್ರಾರ್ಥನ ಗೀತೆ:** ದೇವರ ನಾಮಗಳನ್ನು ತಮಗೆ ಗಂಡಾಂತರಗಳಿಂದ ಪರಿಹರಿಸು ದೇವರೇ ಎಂದು ಪ್ರಾರ್ಥಿಸುತ್ತಾರೆ.

ಪದವೇ ಶ್ರೀ ಗುರುಪಾದ ಪದ್ಮ ಸನ್ನಿಧಿಗೆ ||ಪಲ್ಲ||

ಲೇಸ ಮಂತ್ರಮು ಭಕ್ತಿ ಲೇಕುಂಟೆ ಮೇಲು

ಮುತ್ತು ರತ್ನಾಮು ಲೇನ

ಮುರಗುತೇ ವಿಸುಖಮಾ

**ಮದುವೆಯ ಹಾಡು:** ಅರಿಶಿಣ ತುಂಬಕ್ಕೆ ಹುಲಿಗೆವ್ವನ ಕರೆಸಿರೆ ಸೋ ಬನ್ನಿ
ಬಸವಣ್ಣನ ಪಟ್ಟದರಿಸಿಗೆ ಸೋ ಬನ್ನಿ
ಕಳಸ ತುಂಬಕ್ಕೆ ಮಲ್ಲವ್ವನ ಕರಿಸಿರೆ ಸೋ ಬನ್ನಿ
ಹುಲಿಗಣ್ಣನ ಪಟ್ಟದರಿಸಿಗೆ ಸೋ ಬನ್ನಿ

**ಸೋಬಾನ ಹಾಡು:** ಒಂಭತ್ತು ತಿಂಗಳ ಹೊತ್ತು ನಾ ತಿರುಗಿದೆ
ಸ್ವಾಮೆಂದು ನಿನ್ನ ಹಡದೀನಿ ಸೋಬಾನವೆ
ಸ್ವಾಮೆಂದು ನಿನ್ನ ಹಡದೀನಿ ಸತ್ಯಮ್ಮ
ಇಂದಿಗೆ ನಮ್ಮನಿಗೆ ಎರವಾದ ಸೋಬಾನವೆ

**ಋತುಮತಿ ಹಾಡು:** ಕಟ್ಟೆಯ ಹಿಂದೆ ದುಪ್ಪೊಟ್ಟೋದು ಏನೆ
ಆರು ಸಾವಿರದ ಎಲೆ ತೈಟ ಆಗಿರುವ ಅವರ
ಮಾವ ಕೇಳ್ಯಾನ ಹೊಸ ಸುದ್ದಿ
ಹೊಸ ಸುದ್ದಿ ಕೇಳ್ಯಾನೆ ಹುಸುನಗಿ ನಕ್ಯಾನೆ

ಎಸಳ ಮಲ್ಲಿಗೆಯ ಕೊಯಶ್ಯಾನೆ ಸತ್ಯಪ್ಪ
ದಂಡಿ ಎಣಿಸಿ ಸೂಸಿಯಿದ್ದ ಮನಿಗಿ ಕಳಸ್ಯಾನೆ

ಗಂಡಸರ ಹಾಡುಗಳು

ಭಜನ ಗೀತೆಗಳು:

ನಿರರಮ ದೇಶದಿ ಬರಿದೆ ಬಂದಿದೆ ಪಕ್ಷಿ ಚೆಂದಮಾಮ
ಅರಿಸಿ ನೋಡಿದರೆ ಕಸಸಲ್ಲವಿದು ಚೆಂದಮಾಮ
ಆರು ಮುಖದ ಪಕ್ಷಿ ಆನಂದವಾಗಿದೆ ಚೆಂದಮಾಮ
ಕಾರಣದ ಪಕ್ಷಿ ಕಸಲಲ್ಲವಿದು ಚೆಂದಮಾಮ
ಕಟ ಕಾಡೋಳು ಬೆದರಿತು ಕೂಗಿತು ಚೆಂದಮಾಮ
ಅಕಟಕಟಾ ಶ್ರೀಗುರು ಶಾಂತದೊಳ ಅಡಗಿತು ಚೆಂದಮಾಮ

ಹರಕೆ ಗೀತೆಗಳು:

ತೂಗುವ ತೊಟ್ಟಿಲು ತೂಗತಿರಲು |
ಮನೆತುಂಬ ಮಕ್ಕಲು ಆಡುತಿರಲಿ |
ಹಿಡಿದಂತ ಕೈ ತುಂಬ ಬಂಗಾರವಾಗಲಿ |
ನೀಡಿದಂತ ಕೈಗಳು ಮೇಲಾಗಿ |
ಬಿತ್ತಿದಂತ ಭೂತಾಯಿ ಬೋರಾಡಿ ಬೆಳೆಯಲಿ |
ನಿನ್ನ ಕೃತಿಯ ಶೃತಿಯ ತೋರೋ |
ಭಕ್ತರ ಕಾಯೋ ನೀ ಪರಮೇಶ್ವರ |

ಒಗಟು

ಪ್ರಾಚೀನ ಕಾಲದಲ್ಲಿ ಮಾನವನು ಅನಿಸಿಕೆಗಳನ್ನು ಹಂಚಿಕೊಳ್ಳಲು ಕೇವಲ ಸಂಕೇತದ ಮೂಲಕ ವ್ಯಕ್ತಪಡಿಸುತ್ತಿದ್ದನು. ಕ್ರಮೇಣ ಮಾತನಾಡ ಹತ್ತಿದನು. ಆಮೇಲೆ ಸಂಕೇತ ಹಾವ ಭಾವ, ಸೊನ್ನೆ, ಧ್ವನಿ ಮತ್ತು ಹಾಡುಗಳ ಮೂಲಕ ತನ್ನಲ್ಲಿರುವ ವಿಚಾರಗಳನ್ನು ಹೇಳ ತೊಡಗಿದರು. ಹೀಗಾಗಿ ಜನಪದ ಸಾಹಿತ್ಯವು ಬಳಕೆಗೆ ಬಂದಿತು. ಮತ್ತು ತನ್ನ ಜೀವನ ಸಾಗುವಿಕೆಗೆ ಮುಂದುವರೆಸಿಕೊಂಡು ಬರುವಂತಾಯಿತು.

ಸುಡುಗಾಡು ಸಿದ್ಧರಲ್ಲಿ ವಿದ್ಯಾವಂತರ ಸಂಖ್ಯೆ ಕಡಿಮೆ. ವಿದ್ಯಾವಂತ ಸುಡುಗಾಡು ಸಿದ್ಧರಲ್ಲಿ ಸಾಹಿತ್ಯದ ಆಸಕ್ತಿ ಕಡಿಮೆ ಎಂದೇ ಹೇಳಬಹುದು. ಹೀಗಾಗಿ ಈ ಸಮುದಾಯ ದವರಲ್ಲಿ ಯಾವೊಬ್ಬ ಶಿಷ್ಟ ಸಾಹಿತಿಯೂ ಇನ್ನೂ ಕಂಡುಬಂದಿಲ್ಲ. ಆದರೆ ಜನಪದ ಸಾಹಿತ್ಯ ದಲ್ಲಿ ಸಮುದಾಯದ ಪ್ರತಿಯೊಬ್ಬರೂ ಕಲಿಗಳೇ ಎನ್ನಬಹುದು.

ಭಾಷೆ

ಭಾಷೆ ಮಾನವನ ಪ್ರಪಂಚದ ಮೇಲೆ ಬೆಳಕು ತರುವ, ಮಾತೇ ಪ್ರಧಾನವಾಗಿ ಭಾಷೆ ಎನಿಸಿಕೊಳ್ಳುವುದು. ತೆಲುಗು, ಕನ್ನಡ ಸೋದರ ಭಾಷೆಗಳಾಗಿದ್ದು ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿಕೊಂಡಿವೆ. ಕನ್ನಡ ನಾಡಿನಲ್ಲಿ ನೆಲೆಸಿರುವ ಸುಡುಗಾಡು ಸಿದ್ಧರು ಮಾತನಾಡುವ ತೆಲುಗಿನ

ಮೇಲೆ ಕನ್ನಡ ಪ್ರಭಾವ ಸಾಕಷ್ಟಾಗಿದೆ. ತೆಲುಗು ಸಾಹಿತ್ಯ ಪ್ರಾರಂಭವಾಗುವ ಮೊದಲೆ ಕನ್ನಡ ಸಾಹಿತ್ಯದಲ್ಲಿ ಅನೇಕ ಕೃತಿಗಳು ಪ್ರಕಟವಾಗಿದ್ದವು. ತೆಲುಗು ಮಾತನಾಡುವ ಸುಡುಗಾಡು ಸಿದ್ಧರ ಭಾಷೆಯ ಮೇಲೆ ಇಂಡೋ ಆರ್ಯನ್ ಭಾಷಾ ಕುಟುಂಬಕ್ಕೆ ಸೇರಿದ ಮರಾಠಿ ಮತ್ತು ಹಿಂದಿ ಭಾಷೆಗಳ ಪ್ರಭಾವ ಬೀರಿದೆ. ಇವುಗಳ ಜೊತೆಗೆ ಸಾಕಷ್ಟು ಕನ್ನಡದ ಪ್ರಭಾವವೂ ಇವರ ಭಾಷೆಯ ಮೇಲಾಗಿದೆ.

ಕೋಷ್ಟಕ ೮.೧. ಸುಡುಗಾಡು ಸಿದ್ಧರು ಬಳಸುವ ಮರಗು ಭಾಷೆ

| ಮರಗು | ತೆಲಗು | ಕನ್ನಡ |
|---|---|---|
| ಅಂಟಕೆ | ತಿದಿಕೊ | ತೆಗೆದಿಕೊ |
| ಅಂಟಕಿಲಾ | ಅದಿಕಂ | ಹೆಚ್ಚು |
| ಅಂಟುಕೊನು | ತಿಸಕೊನು | ತೆಗೆದುಕೊಳ್ಳದೆ ಇರುವುದು |
| ಅಡಿ | ಆಬದಂ, ಉರಕ್ಕನೆ | ಸುಮ |
| ಅಮ್ರ | ಭಾಗ | ಭಾಗ |
| ಅಕೋಡೆ | ಪರ್ವಾಲೇದು | ತೊಂದರೆಯಿಲ್ಲ |
| ಅಶಕೋಟಿ | ಮಾಂಸಂ, ತುನುಕಾ | ಮಾಂಸ |
| ಅರಿಗಪಂತು | ಬಾರಿಸಂತವೆಸಂ | ಬಾಲಸಂತರವೇಷ |
| ಇಕ್ಕಕೋಟಿ | ಶೆಟ್ಟು | ಗಿಡ |
| ಇಗ್ಗಾಟಂ | ಸವ್ವಟಂ, ನವ್ವು | ನಗು |
| ಎನ್ನೆಸಗಾಡು | ಎಲುಕ | ಇಲಿ |
| ಊರಗಾಶಿಂ | ಪಿಲ್ಲಿ | ಬೆಕ್ಕು |
| ಈಕೆನಗಾಡು | ತಲಗು | ಬೆನ್ನುಹತ್ತು, ವಿಚಾರಿಸು |
| ಐಂಪುವಾ | ಮುಂಗಸು | ಮುಂಗಲಿ |
| ಎಲ್ಕೋಡು | ಗೌಡ, ರಡ್ಡಿ | ಗೌಡ |
| ಎಳೆಗಾಡು | ಬೋಗಂವಾಡು | ಭೋಗಿಸು |
| ಬೆಳೆಕಾಂತಿ | ಬೋಗಂಶ್ರಿ | ಭೋಗಿಸುವವ |
| ಉಗಿಯ್ಯ | ಇಚ್ಚೆಶ್ಯೆ | ಕೊಡುವ ಕೈ, ದಾನಮಾಡುವವ |
| ಐಕಿಯಂಶ್ಯೆ | ದಾಪೆಟ್ಟು | ಮುಚ್ಚಿಡು, ತೆಗೆದಿಡು |
| ಓಂಟು | ಅಪರಿಚಿತುನ್ನಿ | ಅಪರಿಚತನನ್ನು ಮನವೊಲಿಸುವುದು |
| ಓಲ್ತು | ಡಬ್ಬು | ಹಣ |
| ಓಲ್ತುಗಾಡು | ಭೀಕ್ಷಂಗಾಡು | ಹಣವಂತ |
| ಕುಂಬಿಕಂ | ಡಬ್ಬು | ಹಣ |
| ಕಂಬಿಕದಾರಿ | ಧನವಂತಡು | ಧನಿಕ, ಹಣವಂತ |

| ಮರಗು | ತೆಲಗು | ಕನ್ನಡ |
|---|---|---|
| ಕಂಜು | ಸಂಭೋಗಿಂಚು | ಸಂಭೋಗಿಸು |
| ಕಂಜುಲಾಟ | ಸಂಬೋಗಂ | ಸಂಬೋಗ |
| ಕಡ್ಡಿಗಾಡು | ಗೌಡ, ಎಲಕೋಡು | ಗೌಡರು |
| ಕತ್ಥಬಂ | ಮುಚಲಿಕ | ಅಡವು ಮುಚ್ಚಳಿಕೆ |
| ಕನ್ಕೆ | ಮಂದ್ಯ | ಔಷಧ |
| ಕೆನ್ಕಟಗಾಡು | ಮಂದಲು, ಕುಲಸ್ತಡು | ಔಷಧ ನೀಡುವ ಮನುಷ್ಯ |
| ಕನ್ಕೆದಾರಿ | ಮಂದೋಡು | ಔಷಧ ಕೊಡುವವ |
| ಕರೀಂಪು | ಚೆಂಪು, ತಿಟ್ಟು | ಸಾಯಿಸು, ಬೆಯ್ಯು |
| ಕಬ್ಬಿ | ರಹಕ್ಯೂಂ | ರಹಸ್ಯ |
| ಕರೀಂಪ್ರ | ಚಂಪ್ರ | ಸಾಯಿಸು |
| ಕರೀಶಿಪೋವು | ಚನಿಪೋವು | ಸತ್ತುಹೋಗು |
| ಕರ್ಕ್ಯುವಾಂ | ಮಾಮಿಡಿಕಾಯಿ | ಮಾವಿನಕಾಯಿ |
| ಕರ್ರ್ಯೋಟಿಗಾಡಿ | ಎಂಡ್ರಕಾಯಿ | ಏಡಿ |
| ಕಿನೆಶಗಾಡು | ಮಾದಿಗೊಡು | ಮಾದಿಗರು |
| ಕರವ್ವಡಿ | ಚಿಕಟಿಮೊಬ್ಬು | ರಾತ್ರಿ, ಕತ್ತಲು |
| ಕಲ್ಲಾಂ | ರಾಯಿ | ಕಲ್ಲು |
| ಕಲುಗಾಡು | ಕರಿಸಾಲಿ | ಕರಿಮನುಷ್ಯ |
| ಜಕಶಾದಂ | ಅಪಾಯಂ | ಅಪಾಯ, ತೊಂದರೆ |
| ಕಶಿಂಪು | ತಿಟ್ಟು | ಬೈಗಳು |
| ಕಾಜಾಂ | ಚೇಪು, ಶಾಪಲು | ಮೀನು |
| ಕಾರಂಕೊಟ್ಲು | ಮಿಂಪಕಾಯಲು | ಮೆಣಸಿನಕಾಯಿ |
| ಕಾರಿಗಾಡು | ಕುಲಸ್ತಡು | ಬುಡಗ ಜಂಗಮ |
| ಕಾಠ್ಕುಡು | ಕೋಪಿಷ್ಟ | ಕೊಪಿಷ್ಠ |
| ಕೊಂಪ | ಇಲ್ಲು | ಮನೆ |
| ಕಾಶ್ಕಂ | ದಯಂ | ದೆವ್ವ |
| ಕಾಶ್ಕದಾರಿ | ಭೂತವೈದ್ಯಡು | ದೈವ್ವ ಬಿಡಿಸುವವನು |
| ಕಿಟ್ಟಿಪೋವು | ಕಚ್ಚಿಪೋವು | ಸತ್ತುಹೋಗು |
| ಕೀನಗಾಡು | ಮಾದಿಗವಾಡು | ಮಾದಿಗ, ಚಲವಾದಿ |
| ಕುಚ್ಚುಗಾಡು | ಪೋಲಿಸವಾಡು | ಪೋಲಿಸ |
| ಕುಮ್ಮಿಗಾಡು | ಕುಮ್ಮರಿ | ಕಮ್ಮಾರ |

| ಮರಗು | ತೆಲಗು | ಕನ್ನಡ |
|---|---|---|
| ಕುರಂಗಾಡು | ತಾಬೇತ್ | ಆಮೆ |
| ಕೆಂದ | ವಸ್ತ್ರಂ | ವಸ್ತ್ರ |
| ಕೆಂದಲುಗಾಡು | ಚಾಕಲಿ, ಸಾಕಲೋಡು | ಅಗಸ |
| ಕೇಮುಂಚು | ನೊಕ್ಕಿಚೆಪ್ಪು | ವಿಚಾರಿಸಿ ಹೇಳು |
| ಕೈಕಾ | ಕುಕ್ಕೆ | ನಾಯಿ |
| ಕೈಪು | ತಿನು | ತಿನ್ನು |
| ಕೊಂಕಡಂ | ಪುರಷಾಂಗಂ | ಪುರುಷಾಂಗ |
| ಕೊಕ್ಕಿಡಿಗಾಡು | ಕೋಡಿ | ಕೋಳಿ |
| ಕೊಕ್ಕುಮಿಡಸಡು | ದೊಂಗ | ಕಳ್ಳ |
| ಕೊಡಿ | ತಪ್ಪು | ತಪ್ಪು |
| ಕೊರಂಜಿಗಾಡು | ಎರಕಲವಾಡು | ಕೊರಮ |
| ಕೋಸಾಂ | ಪುರಷಾಂಗಂ | ಪುರುಷಾಂಗ |
| ಗಂಡುಂಡು | ಗಂಡಗಾಡು | ಆಕ್ರಮಸಂಬಂಧ ಹೊಂದಿದವನು |
| ಗಬ್ಬಿ | ಭೂತು, ವಿರುಡು | ಮಿಂಡೆ |
| ಗಾಸ್ಪಾಂ | ಗಡ್ಡಿ | ಹುಲ್ಲು |
| ಗಿಂಜಾಂ | ರೂಪಾಯಿ | ರೂಪಾಯಿ |
| ಗಿಜಿಗಾಡು | ಮಂಗಲಿ | ಹಜಾಮ, ಕ್ಷೌರಿಕ |
| ಗೀತಾಟ್ಕಂ | ಏಡವಟಂ | ಅಳುವುದು ತೊಂದರೆ |
| ಗುಂಟಿಗಾಡು | ಪಿಚ್ಚಿಗುಂಟಲೋಡು | ಹುಚ್ಚುತನವನ್ನು ಹೊಂದಿದವ |
| ಗುಯಂ | ಗುದಂ, ಗುದ್ದ | ಗುಧ, ಮುಕಳಿ |
| ಗುಲ್ಪಂ | ಪ್ರಶಂಶಾ | ಪ್ರಶಂಸೆ |
| ಗುಟಿಗಾಡು | ಪಂದಿ | ಹಂದಿ |
| ಗಂಡೆಗಾಡು | ಗುಡೆಂ ಏರ್ಪಾಟು | ವ್ಯವಸ್ಥಾಪಕ |
| ಗೂಸು | ಅವಮಾನಂ | ಅವಮಾನ |
| ಗೋಟ್ಯಾಯಂ | ಸ್ತ್ರೀಮರ್ಮವಯಂ | ಹೆಣ್ಣು ಮಾರ್ಮಂಗ |
| ಗೊಟ್ಟೆಗಾಡು | ವಿಶಿ, ನಾರಿ | ಹೆಣ್ಣುಮಗಳು |
| ಗೋಕೆಂದಾ | ಗುಡುಸರಿ, ಮೊಸಕಾರಿ | ವಂಚಿಸುವ, ವಂಚನೆಮಾಡುವವ |
| ಚಕ್ರಕೋಟಿ | ರೋಟ್ಟೆ | ರೊಟ್ಟಿ |
| ಜಂತಕೋಲಿ | ದಯಂ | ದೆವ್ವ |
| ಜಂಗಾಶ್ಕಂ | ಜಂಗುಪಿಲ್ಲಿ | ಅಡವಿ ಬೆಕ್ಕು |

| ಮರಗು | ತೆಲಗು | ಕನ್ನಡ |
|---|---|---|
| ಜಕಾರಿಗಾಡು | ಮಂಡಿಕುಲಾನಿಕಿ | ಮೊಂಡಕುಲಕ್ಕೆ ಸಂಬಂಧಿಸಿದವ |
| ಜ್ಯಾನು | ವೆಳ್ಳು | ಹೋಗು |
| ಜಿಚ್ಚುಪುನಂ | ಕಾಮಕಡು | ಕಾಮುಕ |
| ಜಡ್ನುವಾಂ | ತಲ, ತಲಕಾಯಿ | ತಲೆ |
| ಜಡ್ಡೆಗಾಡು | ಯಾದವಡು | ಕುರುಬ |
| ಜೇರ್ಕ್ಯಾ | ಪ್ರಮಯಂ | ಝೇರಿ |
| ಜೀವಟಾಲು | ಗಿಂಜಲು | ದವಸ, ಧಾನ್ಯ |
| ಜೋಡಾಲು | ಜೊನ್ನಲು | ಜೋಳ |
| ತಾಟಿಕಾಡು | ಬ್ರಾಹ್ಮಣಡು | ಬ್ರಾಹ್ಮಣ |
| ತುಕಾರಿಗಾಡು | ಕಟಿಕವಾಡು | ಕಲಾಲ್, ಮಾಂಸಮಾರಾಟಗಾರ |
| ತೆಲ್ವಲೋಡು | ಚಾಕಲಿ, ಸಾರಲೋಡು | |
| ತೆಲಾಂ | ರೂಪಾಯಿ | ರೂಪಾಯಿ |
| ತೋಲಿಪ್ಯಾಂ | ಅಂಬಲಿ, ಕಟ್ರ | ಅಂಬಲಿ |
| ತೊಡ್ಸಿಗಾಡು | ಉಡತಾ | ಇಣಚಿ, ಅಳಿಲು |
| ದತ್ತು | ಅಲ್ಲರಿಚೆಯು | |
| ದಬ್ಲಿಕೋಟಿ | ಗಂಜಿ | ಗಂಜಿ, ಅಂಬಲಿ |
| ದಾರಿಗಾಡು | ತರಸ್ಕುಡು | ಮುಸಲ್ಮಾನ |
| ದಾಸಿಗಾಡು | ದಾಸರೋಳು | ದಾಸರು |
| ದ್ಯೆಪು | ಕೊಟ್ಟು, | ಬಡಿ |
| ನಚುಂಡು | ಉಂಡು, ಆಗು | ಸುಮ್ಮನೇಇರು |
| ನರಸಿಗಾಡು | ನಕ್ಕ | ನರಿ |
| ನಾಗನ | ವದ್ದು | ಬೇಡ |
| ನಾಟುಪಂತು | ನಾಟಾಂ, ಅಂದೆಕೊನಿ | ಭವಿಷ್ಯ ಹೇಳುವವ |
| ನಿಕ್ಕೊಟ್ಟು | ಪೊಂಪಿಯಿ | ಕಳಿಸು |
| ನರ್ಕ್ಯಲು | ವಡ್ಲಲು | ಭತ್ತ |
| ನಲಪು | ಸರಾಯಿ | ಸರಾಯಿ |
| ನಾಪ್ಕೊ | ತಿಸಕೊ | ತೆಗೆದುಕೊಳ್ಳು |
| ನೆಟ್ಟಗಾಡು | ದೊರ | ದೊರೆ, ಯಜಮಾನ, ಮಾಲಿಕ |
| ನೆಕ್ಕಿ | ಚೊಡು | ನೋಡು |
| ನೆಟ್ಟು | ಸೊಮ್ಮಾ | ಆಸ್ತಿ, ಬಂಗಾರ, |

| ಮರಗು | ತೆಲಗು | ಕನ್ನಡ |
|---|---|---|
| ಪಂತು | ವೆಶಂ | ವೇಷಧಾರಿ |
| ಪಚ್ಚಾಟ್ಕಾಂ | ದೊಂಗತನಂ | ಕಳ್ಳತನ |
| ಪಚ್ಚಾಂ | ಪಚ್ಚಿಪಗಾಡು | ಹಸಿ ತಂಬಾಕು |
| ಪಚ್ಚಿಗಾಡು | ದೊಂಗ | ಕಳ್ಳ |
| ಪತ್ರಕೋಟಿ | ರಾಯಿ | ಕಲ್ಲು |
| ಪಲ್ಲಾಟಂ | ಮಾಟ್ಲಾಡಟಂ | ಮಾತನಾಡುವವ |
| ಪಾಣ್ಕಲು | ಮುತ್ರಂ | ಮಂತ್ರ |
| ಪಿಂಕೆ | ಪಿಲ್ಲ | ಹುಡುಗಿ |
| ಪಾಣ್ಕಶಾಲು | ನೀಳು | ನೀರು |
| ಪಾಷ್ಟಾವಂ | ಚೆಪ್ಪು | ಹೇಳು |
| ಪಿಂಕೆಡು | ಪಿಲ್ಲವಾಡು | ಹುಡುಗ |
| ಪಿತ್ಪ | ಬಾಡಿಲುಚೆಪ್ಪು | ಸುಮ್ಮನೆ ಹೇಳು |
| ಪುಲ್ಲಾಕೊಟ್ಲಿ | ಶಿಂತಕಾಯಿ | ಹುಣಿಸೆಕಾಯಿ |
| ಬಡ್ಕಾಶಂ | ಬರ್ರೆ, ಹಾವು | ಆಕಳು, ಗೋವು |
| ಬಾರ್ತಿಗಾಡು | ವಡ್ಡರೆವಾಡು | ಕವಲೆತ್ತಿನವರು |
| ಬಡೆಂಗಾಡು | ದೊಮ್ಮರಿವಾಡು | ಬಡಿಗೆ ಕೆಲಸಮಾಡುವವ |
| ಬಿರಾಡು | ವಕಾರಂ | ವಠಾರ |
| ಬೀರುಗ | ಭಾಗ, ಮಂಚಿಗ | ಒಳ್ಳೆಯದು |
| ಭೂತಾಕಾಶ್ಕಂ | ಭೂತಪಿಲ್ಲಿ | ಭೂತದ ಬೆಕ್ಕು |
| ಬಲ್ಲಕೋಟಿ | ರಕ್ತಂ | ರಕ್ತ |
| ಭೋಡಶಾಂ | ಗಿನ್ನಿಪಾತ್ರ | ಗಡಿಗೆ, ಪಾತ್ರೆಗಳು |
| ಮಕ್ಕಡಿಗಾಡು | ಲಂಬಾಡಿವಾಡು | ಲಂಬಾಣಿ |
| ಮಟ್ಟಿಗಾಡು | ಗ್ರಾಮೀಣಡು | ಹಳ್ಳಿಯವನು |
| ಮಟ್ಟಿವಾಂ | ಮಣ್ಣು | ಮಣ್ಣು |
| ಮತ್ತೆ | ಇಲ್ಲು | ಮನೆ |
| ಮಬ್ಬಗಾಡು | ಭೊಯೋವಾಡು | ನಾಯಕ, ಭೊವಿ ಜನಾಂಗದವ |
| ಮಲ್ಲು | ನಿದ್ರಿಂಚು | ಮಲಗು, ಮಲಗಿಕೊ |
| ಮಾರಪಿಲ್ಲು | ಅಮ್ಮಕೊ | ಮಾರಿಕೊಳ್ಳು |
| ಮಶಕೋಟಿ | ಸ್ತ್ರೀ | ಹೆಣ್ಣು |
| ಮ್ಯಾತ | ಅನಂ | ಅನ್ನ, ಆಹಾರ |

| ಮರಗು | ತೆಲಗು | ಕನ್ನಡ |
|---|---|---|
| ಮ್ಯಾಶಂ | ಮೇಕ | ಆಡು |
| ಮಿಟಿಪಿಳ್ಳು | ಭೀಯಂ | ಅಕ್ಕಿ |
| ಮಿರ್ಕ್ಯ | ನಿರ್ಲಕ್ಷ್ಯಂ | ನಿರ್ಲಕ್ಷ |
| ಮಿಟಾಂ | ಉಪ್ಪು | ಉಪ್ಪು |
| ಮಿಟಾಂಗಾಡು | ತೇಲು, ಉಪ್ಪರೋಡು | ಚೇಳು |
| ಮುತಕಾರಿ | ಮುಸಲೋಡು | ಮುದುಕಿ |
| ಮುತ್ತಗಾಡು | ದೇವಡು | ದೇವರು |
| ಮುತ್ತಡಿ | ದೇವತ, ಅಮ್ಮತಲ್ಲಿ | ದೇವತೆ, ತಾಯಿ, ದೇವಿ |
| ಮಂಡಾಸ್ಕಾಲ | ಮೊಂಡಿ ಮಣಿಸಿ | ಹಠಮಾರಿ ಮನುಷ್ಯ |
| ಮೋಗೆ | ಗಿನ್ನ, ಚೆಂಬು | ತಾಟು, ತಂಬಿಗೆ |
| ಯಾಸಾಂ | ಪಾಮು | ಹಾವು |
| ಲಕ್ಕು | ನಟನ | ನಟನೆ |
| ವಲೆಂಗಾಡು | ಉಡುಮು | ಉಡ |
| ವಾಡಿವಾಂ | ಕತ್ತಿ | ಕತ್ತಿ, ದೊಡ್ಡ ಚಾಕು |
| ವಾಲ್ಕು | ವೇಷಂ | ವಿಭಿನ್ನ ಬಟ್ಟೆ ಹಾಕಿಕೊಳ್ಳುವವ |
| ವಾಲ್ಕೊ | ಕುಚೋ | ಕುಳಿತುಕೊ |
| ಶಖಾಂ | ಕುರ, ಪುಲಶರಾ | ಪಲ್ಯೆ, ಸಾರು, ಸಾಂಬಾರು |
| ಶೆತ್ರಾಂ | ಜೇನಂ, ಶೇನು | ಜೇನು |
| ಸಾಯಿದಾ | ಸಾಕ್ಷಂ | ಪ್ರಮಾಣ |
| ಸಿದಾನಂ | ಕಲ್ಲು | ಹೆಂಡ, ಸೇಂದಿ |
| ಸಿರಸ್ತ | ಪದ್ಧತಿ ಆಚಾರಂ | ಆಚರಣೆ, ಪದ್ಧತಿ, ನಿಯಮ |
| ಶಿರಸವೆಂ | ತಲಾ | ತಲೆ, ಶಿರ |
| ಸೀಲಕೊಟಿ | ಸ್ತನಂ | ಮೊಲೆ |
| ಸೊಕ್ಕಾಲು | ಜೊನ್ನಲು | ಜೋಳ, ಧಾನ್ಯಗಳು |
| ಸೌರ | ವದ್ದು | ಬೇಡ, ನಿರಾಕರಿಸು |
| ನೇತುಬಟ್ಟು | ಯನಪೂಸು | ಬೆಣ್ಣೆ |
| ಕಟ್ಯಾಂ | ಗೂಟನಂ | ಗೂಟ |
| ಶ್ಯೆತಾಂ | ಶೇನು | ಹೊಲ |
| ಸಿನಾಯ್ಯ | ಸಿನಪ | ಚಿಕ್ಕಪ್ಪ |
| ತಲ್ಲಿ | ಅಮ್ಮ | ತಾಯಿ |
| ಬುಡಬ್ಯಾಂ | ಕೊಡಪಾನಂ | ಬಿಂದಿಗೆ |

**ಸುಡುಗಾಡು ಸಿದ್ಧರು ಬಳಸುವ ವರ್ಗೀಕೃತ ಶಬ್ದಾವಳಿ**

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ಚೀರ | ಸೀರೆ | ನೀಳ್ಳು | ನೀರು |
| ತಾಳಿ | ತಾಳಿ | ರವಿಕೆ | ಕುಪ್ಪಸ |
| ಆಡಪಿಲ್ಲ | ಹೆಂಗಸರು | ಪಣತೆ | ಹಣತೆ |
| ಚೆಂಬು | ತಂಬಿಗೆ | ಜಲ್ಲೆ | ಜಲ್ಲಿ |
| ಆವು | ಆಕಳು | ಮೇಕ | ಮೇಕೆ |
| ಎದ್ದು | ಎತ್ತು | ಬರ್ರೆ | ಎಮ್ಮೆ |
| ಗಾಡದಿ | ಕತ್ತೆ | ಕೋಡಿ | ಕೋಳಿ |
| ಪುಲಿ | ಹುಲಿ | ಗೊರ್ರೆ | ಕುರಿ |
| ಲೇಗ | ಕರು | ಪುಂಜು | ಹುಂಜ |
| ಚೆವಿ | ಕಿವಿ | ಕುತ್ತುಕ | ಕತ್ತು |
| **ಬಾಂಧವ್ಯ** | | | |
| ಅಮ್ಮ | ಅಮ್ಮ | ಅಯ್ಯ | ಅಪ್ಪ |
| ಅವ್ವ | ಅಜ್ಜಿ | ತಮ್ಮುಡು | ತಮ್ಮ |
| ತಾತ | ತಾತ | ಅಲ್ಲುಡು | ಅಳಿಯ |
| ಮಿತ್ರುಡು | ಮಿತ್ರ | ತಲ್ಲಿ ತಂಡರಿ | ತಾಯಿಯ ತಂದೆ |
| ಅಮ್ಮಅಲ್ಲಿ | ತಾಯಿಯ ತಾಯಿ | ಪೆಂಡಲಾಮು | ಹೆಂಡತಿ |
| ಮೊಗಡು | ಗಂಡ | ಕೊಡಲು | ಸೊಸೆ |
| ತಂಡರಿ | ತಂದೆ | ಕೊಡಕು | ಮಗ |
| ಬಿಡ್ಡ | ಮಗಳು | ಪ್ರೇಮಿಂಚು | ಪ್ರೀತಿಸು |
| ಚೆಲ್ಲಿಲು | ತಂಗಿ | ಅನ್ನದಮ್ಮುಲು | ಸೋದರರು |
| ಮೈನಮಾಮ | ಸೋದರಮಾವ | ಮೈನಾತ್ತ | ಸೋದರತ್ತೆ |
| ಪಿನ್ನಮ್ಮ | ಚಿಕ್ಕಮ್ಮ | ಚಿನ್ನಅಯ್ಯ | ಚಿಕ್ಕಪ್ಪ |
| **ಶರೀರ ಭಾಗಗಳು** | | | |
| ತಲ | ತಲೆ | ಮೊಗಾಮ | ಮುಖ |
| ಚೈಯಿ | ಕೈ | ಗೋರು | ಉಗುರು |
| ಪಲ್ಲು | ಹಲ್ಲು | ಕನ್ನು | ಕಣ್ಣು |
| ಸೈವಳು | ಕೈಬೆರಳು | ಕಾಳುಎಳು | ಕಾಲ್ಬೆರಳು |
| ಕನ್ನು | ಕಣ್ಣು | ಪೆದವು | ತುಟಿ |
| ಹಿಂಬಡಮ | ಹಿಮ್ಮಡಿ | ಭುಜಂ | ಭುಜ |

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ಪಣ | ಕಣತಲೆ | ನಡಮನು | ಸೊಂಟ |
| ಚೆವ್ವ | ಕಿವಿ | ಮಂಡಿಚ್ಚೆ | ಮೊಣಕ್ಕೆ |
| ನೊರು | ಬಾಯಿ | ಮಿಸಾಲು | ಮೀಸೆ |
| ನರಾಲು | ನರ | ಎನ್ನು | ಬೆನ್ನಲುಬು |
| ಪೊಣ | ಹಣೆ | ಸೇರಿರಂ | ಶಿಶ್ನ |
| ತಲಕಾಯಿ | ಮುಂಡ | ಯಮಕಾ | ಮೂಳೆ |
| ಚ್ಯೆಯಿ | ಅಂಗೈ | ಮೆಡಕಾಯಿ | ಕತ್ತುಪಟ್ಟಿ |
| ಚ್ಯೆ | ಕೈ | ಮೆದಡು | ಮೆದಳು |
| ಗೋರು | ಉಗುರು | ಮುಕ್ಕು | ಮೂಗು |
| ನಾಡಿಲು | ನಾಡಿ | ಬೊಡ್ಡು | ಹೊಕ್ಕಳು |
| ಅನ್ನಂನಾಳ | ಅನ್ನನಾಳ | ರೆಪ್ಪಾ | ರೆಪ್ಪೆ |
| ಪಕೆಮಕ | ಪಕ್ಕೆಲುಬು | ಪಿತ್ತಂ | ಪಿತ್ತ |
| ಎನ್ನು | ಬೆನ್ನು | ಕಡಪು | ಹೊಟ್ಟೆ |
| ಪಾದಾಲು | ಪಾದ | ಎಂದಿಗಲು | ಕೂದಲು |
| ದವಡ | ವಸಡು | ಕಣ್ಣೀಳು | ಕಣ್ಣೀರು |
| ಆಲಿಂಪಿಲು | ಆಕಳಿಸು | ಕಾಮಣಿ | ಕಾಮಾಲೆ |
| ಪುರುಗು | ಹುಳು | ನವ್ವ | ತುರಿತ |
| ದಗ್ಗು | ಕೆಮ್ಮು | ಗರ್ಭಪಾತಂ | ಗರ್ಭಪಾತ |
| ಮೂಕೇಡು | ಮೂಕ | ಬೊಕ್ಕತಲಕಾಯಿ | ಬೊಕ್ಕತಲೆ |
| ಗಾಯಂ | ಗಾಯ | ಬೊಜ್ಜು ಪೈ | ಬೊಜ್ಜುಮೈ |
| ಸೀನು | ಸೀನುವುದು | ಪಡಿಶಿಮ್ | ನೆಗಡಿ |
| ಸಲ್ಲಟಂ | ಚಳಿ | ಉಶಾಧಿ | ಉಗುಳು |
| ನಪ್ಪಿ | ನೋವು | ತಲನೋಪ್ಪ | ತಲೆನೋವು |
| ಕಡಪುನಪ್ಪಿ | ಹೊಟ್ಟೆನೋವು | ಕುಂದೇಲು | ಮಲ |
| ಸನ್ನಗೆ | ತೆಳ್ಳಗಿರುವುದು | ನಿದ್ರಾರೋಗಂ | ನಿದ್ರಾರೋಗ |
| ನಿಧರ | ನಿದ್ರೆ | ಉಮರು | ಬೆವರು |
| ಚೆವ್ವ | ಕೀವು | ನೊರು ಎಂಡೆದಿ | ಬಾಯರಿಕೆ |
| ಗುಲ್ಲಲು | ಗುಳ್ಳೆ | ಗಾಯಂ | ಹುಣ್ಣು |
| ಅಚ್ಚಲು | ಮಚ್ಚೆ | ಬಿಗಿಪಟ್ಟು | ಬಿಗಿಹಿಡಿತ |
| ಉಚ್ಚೆ | ಮೂತ್ರ | ಕುಂಟೋಡು | ಕುಂಟ |

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ಕ್ರಮವಾಚಕಗಳು | | | |
| ವಗಟಿ | ಮೊದಲನೆಯದು | ರೊಂಡು | ಎರಡನೆಯದು |
| ಮುಡು | ಮೂರನೆಯದು | ನಾಲಗು | ನಾಲ್ಕನೆಯದು |
| ಐದು | ಐದನೆಯದು | ಆರನೇದಿ | ಆರನೆಯದು |
| ಎಡನೊದಿ | ಏಳನೆಯದಿ | ಏನಮದಿ | ಎಂಟನೆಯದು |
| ಪದಿ | ಹತ್ತನೆಯ | | |
| ಸಂಖ್ಯೆಗಳು | | | |
| ಒಕ್ಕಟಿ | ಒಂದು | ರೊಂಡು | ಎರಡು |
| ಮುಡು | ಮೂರು | ನಾಲಗು | ನಾಲ್ಕು |
| ಐದು | ಐದು | ಆರು | ಆರು |
| ಎಡು | ಏಳು | ಎನಿಮಿದಿ | ಎಂಟು |
| ತೊಮ್ಮಿದಿ | ಒಂಭತ್ತು | ಪದಿ | ಹತ್ತು |
| ಪದ್ದ ಕೊಂಡು | ಹನ್ನೊಂದು | ಪನ್ನೆಂಡು | ಹನ್ನೆರಡು |
| ಪದಮುಡು | ಹದಿಮೂರು | ಪದನಾಲಗು | ಹದಿನಾಲ್ಕು |
| ಪದ್ಯೆದು | ಹದಿನೈದು | ಪದಾರು | ಹದಿನಾರು |
| ಪದೇಡು | ಹದಿನೇಳು | ಪದೆನ್ಮದಿ | ಹದಿನೆಂಟು |
| ಪತ್ತೊಂಬಿದಿ | ಹತ್ತೊಂಬತು | ಇರವ್ಯೆ | ಇಪ್ಪತ್ತು |
| ಮುಪ್ಪೆ | ಮೂವತ್ತು | ನಲಬ್ಬೆ | ನಲವತ್ತು |
| ಯಾಬಯ್ಯಿ | ಐವತ್ತು | ಅರವ್ಯೆ | ಅರವತ್ತು |
| ಡಬ್ಬೈ | ಎಪ್ಪತ್ತು | ಎನಬ್ಬೆ | ಎಂಭತ್ತು |
| ತೊಂಬ್ಬೆ | ತೊಂಭತ್ತು | ವಂದ | ನೂರು |
| ರೊಂಡುವಂದಲು | ಇನ್ನೂರು | ಮುಡುವಂದಲು | ಮೂನ್ನೂರು |
| ನಾಲ್ಗವಂದಲು | ನಾಲ್ಕುನೂರು | ಐದುನೂರು | ಐನೂರು |
| ಐಡುನೂರು | ಏಳುನೂರು | ಎನಿಮಿದಿನೂರು | ಎಂಟುನೂರು |
| ತೊಂಬ್ಬೆನೂರು | ಒಂಭ್ಯೆನೂರು | ಒಕ್ಕವೇಯಲು | ಒಂದುಸಾವಿರ |
| ಪದಿವೇಯಲು | ಹತ್ತುಸಾವಿರ | ಪದಿಲಕ್ಷ | ಹತ್ತುಲಕ್ಷ |
| ಒಕ್ಕಕೋಟಿ | ಒಂದು ಕೋಟಿ | ವೆಯಿಕೋಟಿ | ನೂರು ಕೋಟಿ |
| ವಾರದ ಏಳು ದಿನಗಳು | | | |
| ಸೋಮವಾರಂ | ಸೋಮವಾರ | ಮಂಗಳವಾರಂ | ಮಂಗಳವಾರ |
| ಬುಧವಾರಂ | ಬುಧವಾರ | ಗುರುವಾರಂ | ಗುರುವಾರ |

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ಶುಕ್ರವಾರಂ | ಶುಕ್ರವಾರ | ಶನಿವಾರಂ | ಶನಿವಾರ |
| ಭಾನುವಾರಂ | ಭಾನುವಾರ | | |
| **ಹುಳುಗಳು ಮತ್ತು ಕೀಟಗಳು** | | | |
| ಪೆದ್ದಪಾಮು | ಹೆಬಾವು | ಮುರಗುಂಜ | ಕಡಲಾಮೆ |
| ನಾಗಪಾಮು | ನಾಗರಹಾವು | ಎಂಡ್ರಕಾಯಿ | ಏಡಿ |
| ನಲ್ಲಲು | ತಿಗಣೆ | ಜೀರ್ಲು | ಜೀರುಂಡೆ |
| ಬಲ್ಲಿ | ಹಲ್ಲಿ | ವಿಷಂ | ವಿ, |
| ಪೇನು | ಹೇನು | ಕಣಜಂ | ಕಣಜ |
| ಮಿಡತಾ | ಮಿಡತೆ | ಗೆದ್ದಲು | ಗೆಜ್ಜಲ |
| ಎಡಾ | ಹೆಡೆ | ತೇಲು | ಚೇಳು |
| ಈಗಿಲು | ನೋಣ | ಜ್ಯಾಡ | ಜೇನು |
| ದೋಮಲು | ಸೊಳ್ಳೆ | ಶಾಪಲು | ಮೀನು |
| ಉಡತ | ಇಲಿಚಿ | ಕಪ್ಪಪಿಲ್ಲ | ಕಪ್ಪೆಮರಿ |
| ಕಪ್ಪಾ | ಕಪ್ಪೆ | ಸಂಕು | ಶಂಖ |
| ಪಾಮು | ಹಾವು | ಗುಡ್ಲು | ಮೊಟ್ಟೆ |
| ಪಿಚುಕಾ | ಮರಕುಟುಕ | ಪಕ್ಷೀಲು | ಪಾರಿವಾಳ |
| ಕೊಕೀಲಾ | ಕೋಗಿಲೆ | ಗದ್ದ | ಹದ್ದು |
| ಕಾಕಿ | ಕಾಗೆ | ಪಿಟ್ಟ | ಗುಬ್ಬಚ್ಚಿ |
| ಪಿಟ್ಟಗೂಡು | ಗೂಡು | ಬಾವ್ಲಿ | ಬಾವಲಿ |
| ಕೋಡಿಪಿಲ್ಲ | ಕೋಳಿಮರಿ | ಕಮಜು | ಕೌಜುಹಕ್ಕಿ |
| ಚಿಲಕ | ಗಿಳಿ | ರೆಕ್ಕಾ | ರೆಕ್ಕೆ |
| ಪುಚ್ಛಾಲು | ಗರಿ | ಕೋಡಿ | ಕೋಳಿ |
| ಕೊಕ್ಕರ | ಕೊಕ್ಕರೆ | ಪುಂಜು | ಹುಂಜ |
| **ಪ್ರಾಣಿಗಳು** | | | |
| ಎನಿಗಾ | ಒಂಟೆ | ಕುಕ್ಕ | ನಾಯಿ |
| ಪೆಂಟಿಕುಕ್ಕ | ಹೆಣ್ಣುನಾಯಿ | ಪೆಸರಗಾಡದಿ | ಹೆಸರಗತ್ತೆ |
| ಗಾಡದಿ | ಕತ್ತೆ | ಆವುಲು | ಹಸು |
| ಉಡತ | ಅಳಿಲು | ಖಡ್ಗಮೃಗಂ | ಖಡ್ಗಮೃಗ |
| ಗುರುಂ | ಕುದುರೆ | ಪೆಂಟಿಗುರಂ | ಹೆಣ್ಣು ಕುದುರೆ |
| ಚಿರತಾಲು | ಚಿರತೆ | ಎಂಟುವು | ಮುಂಗಸಿ |

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ತೋಕಾ | ಬಾಲ | ಪಸುಲು | ಪಶು |
| ಪಂಜ | ಪಂಜಲು | ಚಿಕತಾಲು | ಚಿರಚು |
| ಕುಕ್ಕಪಿಲ್ಲ | ನಾಯಿಮರಿ | ಮ್ಯಾಸಾಮು | ಮೇಕೆ |
| ದುಡ | ಕರು | ದುಡಪಿಲ್ಲ | ಹೆಣ್ಣುಕರು |
| ಕಾಶ್ಗಿಮು | ಬೆಕ್ಕು | ಮ್ಯಾಸಾಂಪಿಲ್ಲ | ಮೇಕೆಮರಿ |
| ಕೋತಲು | ಕೋತಿ | ವಾನರ | ವಾನರ |
| ಪುಲಿ | ಹುಲಿ | ಸಾರಂಗ | ಸಾರಂಗ |
| ಜಿಂಕ | ಜಿಂಕೆ | ಎದ್ದು | ಎತ್ತು |
| ಕಳಿಗೊಡ್ಡು | ಕರಡಿ | ತೊಡೇಲು | ತೋಳ |
| ಗೊರ್ರ | ಕುರಿ | ಬರೆಗೊಡ್ಡು | ಎಮ್ಮೆ |
| ಗೊರ್ರ | ಟಗರು | ಎಲಕ | ಇಲಿ |
| ಕಿರುಬ | ಕಿರುಬ | ಯಾಟಕುಕ್ಕ | ಬೇಟೆನಾಯಿ |
| ಎದ್ದು | ಗೂಳಿ | ಸಿಂಹಂ | ಸಿಂಹ |
| ಕೊಮ್ಮು | ಕೊಂಬು | ಪಂದಿ | ಹಂದಿ |
| ಜಗರ | ಚಿಗರೆ | ಎನಿಗೆ | ಆನೆ |
| ನೀಳುಗರುಂ | ನೀರು ಕುದುರೆ | | |
| ಧಾನ್ಯಗಳು ಮತ್ತು ಖಾದ್ಯಪಾದಾರ್ಥಗಳು | | | |
| ಕಂದಲು | ತೊಗರಿಬೆಳೆ | ದಿನಸಲು, ಗಿಂಜಲು | ಕಾಳು, ದಾನ್ಯ |
| ಪಿಂಡ್ಯ | ಹಿಟ್ಟು | ಮೊರಬಂ | ಮುರಬ್ಬ |
| ಉದ್ದಾಲು | ಉದ್ದು | ಉರಗಾಯಿ | ಉಪ್ಪಿನಕಾಯಿ |
| ಕುರ | ಪಲ್ಯ | ಕಾಪಿ | ಕಾಫಿ |
| ಮಿಗಡ | ಕೆನೆ | ಗೋಧಂಲು | ಗೋಧಿ |
| ಚೆನಗಲು | ಕಡಲೆ | ಕಟಗಲು | ರೊಟ್ಟಿ |
| ಅನ್ನಂ | ಅನ್ನ | ಚಾ | ಚಹ |
| ಗಿಣಂ | ಗಿಣ್ಣು | ಅಲ್ಪಾಹಾರಂ | ಉಪಾಹಾರ |
| ಅಟುಕುಲು | ಅವಲಕ್ಕಿ | ಸಕ್ರ | ಸಕ್ಕರೆ |
| ಪೊಟ್ಟು | ಹೊಟ್ಟು | ಜೊನ್ನಲು | ಜೋಳ |
| ಪಲುಸು | ಸಾರು | ಕಾಯಿಗೂರಾ | ತರಕಾರಿ |
| ನೂನೆ | ಎಣ್ಣೆ | ಅಂಬ್ಲಿ | ಅಂಬಲಿ |
| ಗಿಂಜಲು | ಬೇಳೆಕಾಳು | ಸಜ್ಜಲು | ಸಜ್ಜೆ |

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ಯನ್ನಪೂಸು | ಬೆಣ್ಣೆ | ಆಲುಗಡ್ಡು | ಬಟಾಣಿ |
| ಪಾಲುಯನ | ಕೆನೆ | ಅಕಗೋಟಿ | ಮಾಂಸ |
| ಒಡ್ಡು | ಭತ್ತ | ಪಂದಿಲಶಿಗೋಟಿ | ಹಂದಿಮಾಂಸ |
| ತಿಪಿತಿನೇದಿ | ಸಿಹಿತಿಂಡಿ | ರಾಯಸಕ್ರ | ಕಲ್ಲುಸಕ್ಕರೆ |
| ಮೈದಾಪಿಂಡಿ | ಮೈದಾಹಿಟ್ಟು | ಸಾಸ್ಪಿಲು | ಸಾಸಿವೆ |
| ಆಭರಣಗಳು | | | |
| ಉಂಗ್ರಾಲು | ಉಂಗುರ | ಕಡಗಾಲು | ಕಡಗ |
| ಸರಾಲು | ಸರ | ಬೆಂಡ್ಕಾಲಿ | ಬೆಂಡೋಲೆ |
| ಎಂಡಿ | ಬೆಳ್ಳಿ | ಗಾಜಲು | ಬಳೆ |
| ತೋಡ್ಕಾಲು | ತೋಡೆ | ಡಾಬು,ವಡ್ಕಾಣಂ | ಡಾಬು |
| ಕಡಿಯಾಲು | ಕಾಲ್ಕಡಗ | ಮಾಣಿಕ್ಯ | ಮಾಣಿಕ್ಯ |
| ಸರಮು | ಮಾಲೆ | ಕಿರೀಟಂ | ಕಿರೀಟ |
| ಪಗಡಂ | ಹವಳ | ಮುತ್ತಾಲು | ಮುತ್ತು |
| ಕಂಠಾಸರಂ | ಕಂಠಹಾರ | ಕಾಲುಂಗರಾಲು | ಕಾಲುಂಗುರ |
| ವಾದ್ಯಗಳು | | | |
| ಗಂಟಾ | ಗಂಟೆ | ತಂತಿವಾದ್ಯಾಲು | ತಂತಿವಾದ್ಯ |
| ಝಲ್ಲಡಿ | ಝಲ್ಲರಿ | ಕಡದರ ಇಗಾ | ಖಂಜರಿ |
| ಮದ್ದಳೆಲು | ಮದ್ದಲೆ | ಮೃದಂಗ | ಮೃದಂಗ |
| ಜಾಗಟೆ | ತಮಟೆ | ತಬಲಾ | ತಬಲ |
| ಶಂಖು | ಶಂಖ | ಸಹನಾಯಿ | ಬಾಯಿವಾದ್ಯ |
| ಸಿತಾರ | ಸಿತಾರ್ | ನಗಾರ | ನಗಾರಿ |
| ಪಿಟಿಲು | ಪಿಟೀಲು | ಪಿಲ್ಲನಗೋವಿ | ಕೊಳಲು |
| ವೃತ್ತಿಗಳು | | | |
| ಉಪಾದ್ಯಾಯಡು | ಉಪಾಧ್ಯಾಯ | ಪಾಲೋಡು | ಹಾಲಿನವನು |
| ಗೌಳ್ಳೋಳು | ಗೌಳಿಗಿತ್ತಿ | ಕಂಪೌಂಡರ್ | ಕಂಪೌಂಡರ್ |
| ಕವಿ | ಕವಿ | ಕಟುಕವಾಡಿ | ಕಟುಕ |
| ಕಲಾವಿದಡು | ಕಲಾವಿದ | ರೈತಡು | ರೈತ |
| ಕಾರುನಡ್ಡುಪಾಡು | ಕಾರುಚಾಲಕ | ಕುಂಬಾರಡು | ಕುಂಬಾರ |
| ಕೂಲಿಪನಿ | ಕೂಲಿ | ಲೇಖಿಕಡು | ಲೇಖಕ |
| ಚಿತ್ರಕಲಾಕಾರಡು | ಚಿತ್ರಕಲಾಕಾರ | ಕಾವಲುಗಾರಡು | ಕಾವಲುಗಾರ |

| ತೆಲಗು | ಕನ್ನಡ | ತೆಲಗು | ಕನ್ನಡ |
|---|---|---|---|
| ಖಜಾಂಚಿ | ಖಜಾಂಚಿ | ಚಿಲ್ಲರವ್ಯಾಪಾರಸ್ತಡು | ಚಿಲ್ಲರೆ ವ್ಯಾಪಾರಿ |
| ಜಮೀನ್ದಾರಡು | ಜಮೀನ್ದಾರ | ನೇಕೋಡು | ನೇಕಾರ |
| ನಗಲವ್ಯಾಪಾರಿ | ನಗಗಳ ವ್ಯಾಪಾರಿ | ನೂನೆ ಅಮ್ಮಿತೋಡು | ಎಣ್ಣೆ ವ್ಯಾಪಾರಿ |
| ಮಂಡಿ ವ್ಯಾಪಾರಿ | ದಲ್ಲಾಳಿ | ಮಾಂತಗಾಡು | ದೂತ |
| ಪೊಡ್ಲುವೈದ್ಯಡು | ದಂತವೈದ್ಯ | ಎಕ್ಕೆವಾಡು | ಎಕ್ಕುವವನು |
| ಚಾಕಲಿ | ಅಗಸಗಿತ್ತಿ | ಕುಣಿಸೊಡು | ನೃತ್ಯಗಾರ |
| ನಾಟಕಮೋಳು | ನಾಟಕಕಾರ | ಬಾಪನೋಡು | ಪುರೋಹಿತ |
| ಬಡಿಗೊಡು | ಬಡಗಿ | ಬೆಸ್ತಾಡು | ಬೆಸ್ತ |
| ನಾವಿಕಡು | ನಾವಿಕ | ಕಮ್ಮಾರಡು | ಚಮ್ಮಾರ |
| ವಂಟಿವಂಡೋಡು | ಅಡಿಗೆಭಟ | ಮಾಲಿಕಡು | ಮಾಲೀಕ |
| ನೀಳಮಣಿಸಿ | ನೀರಿನವ | ಗುಡುಚೇಡು | ಸ್ವಚ್ಛಮಾಡುವವ |

ಇಂತಹ ಮೇಲಿನ ಅನೇಕ ಶಬ್ದಗಳಲ್ಲಿ ಕನ್ನಡ ಭಾಷೆಯ ಪ್ರಭಾವ ಸಾಕಷ್ಟಾಗಿದೆ. ಹೀಗಾಗಿ ಕನ್ನಡ ತೆಲುಗಿನ ಸಂಬಂಧ ಹತ್ತಿರದು ಎಂಬುದು ತಿಳಿದು ಬರುತ್ತಿದೆ.



೯

# ಪ್ರದರ್ಶಕ ಕಲೆಗಳು

ಜನಪದ ಕಲೆಗಳು ಒಂದು ಪ್ರದೇಶದ ಭವ್ಯ ಪರಂಪರೆಯನ್ನು ಉಳಿಸಿಕೊಂಡು ಬಂದಿವೆ. ಜನತೆಯ ಜೀವನ ವಿಧಾನದ ಮೇಲೆ ಸಂಸ್ಕೃತಿಯ ಪರಂಪರೆಗಳು ಮಾನವನ ಇತಿಹಾಸವನ್ನು ಅರಿತುಕೊಳ್ಳುವಲ್ಲಿ ತುಂಬಾ ಸಹಾಯವಾಗುತ್ತದೆ. ಜನಪದ ಕಲೆಗಳು ಅನಿವಾರ್ಯವಾಗಿ ಉಪಜೀವನದ ಮಾರ್ಗವಾಗಿ ವೃತ್ತಿ ಕಲೆಯಾಗಿ ಪರಿಣಮಿಸಿದವು. ಜನಪದ ಆಟಗಳು, ಮಾನವನ ಮನರಂಜನೆಗಾಗಿ ಹಾಗೂ ಜನರನ್ನು ಸಂತೋಷಪಡಿಸುವುದರ ಸಲುವಾಗಿ ಕುಟುಂಬದ ನಿರ್ವಹಣೆಗಾಗಿ ಕಲೆಗೆ ಹಂಚಿಕೊಳ್ಳುವುದು ಅನಿವಾರ್ಯವಾದವು. ಜನಪದ ಕಲೆಗಳನ್ನು ಸಮೂಹದ ಮಧ್ಯೆ ಪ್ರದರ್ಶಿಸುವುದರ ತಮ್ಮ ಬದುಕಿನ ಜೊತೆಗೆ ಆ ಕಲೆಗಳಿಗೆ ಜೀವಂತಿಕೆಯನ್ನು ಸುಡುಗಾಡು ಸಿದ್ಧರು ನೀಡಿದರು. ಕಲಾಕಾರರ ಮೂಲ ಉದ್ದೇಶ ಮನರಂಜನೆಯನ್ನು ಕೊಡುವುದಾಗಿದೆ. ತಮ್ಮ ಕೈಚಳಕದ ಆಟದಿಂದ ಈ ಆಟಗಳ ಪ್ರದರ್ಶನ ನೀಡಿ ಜನರನ್ನು ಸಂತೋಷಪಡಿಸುತ್ತಾರೆ. ಇವರ ಆಟ ಮನರಂಜನೆಗಾಗಿ ಹುಟ್ಟಿಕೊಂಡಿದ್ದರು. ಉಪಜೀವನಕ್ಕಾಗಿ ಕಲೆ ಕಾರಣಿಭೂತವಾಯಿತು. ಈ ಹಿನ್ನೆಲೆಯಲ್ಲಿಯೇ ಪ್ರತಿಯೊಬ್ಬ ಕಲಾಕಾರನು ಬದುಕುತ್ತಾ ಬಂದಿರುತ್ತಾನೆ. ಸುಡುಗಾಡು ಸಿದ್ಧರು. ತಮ್ಮ ಕೈಚಳಕದ ಕಲೆಯನ್ನು ಭಕ್ತಿಯಿಂದ ಹಾಗೂ ಧಾರ್ಮಿಕ ಹಿನ್ನೆಲೆಯಲ್ಲಿ ಮುಂದುವರೆಸಿಕೊಂಡು ಬಂದಿದ್ದಾರೆ. ಈಗೀನ ಆಧುನಿಕ ದಿನಗಳಲ್ಲಿ ಸಿನಿಮಾ, ಟಿವಿಗಳಿಂದ ಜಾನಪದ ಕಲೆಗಳು ಮರೆತು ಹೋಗುತ್ತಿವೆ. ಮನರಂಜನೆಗಾಗಿ ಬಯಲಾಟ, ನಾಟಕ, ಚಿಣಿಪಡಿ ಆಟ, ಕಲಾ ಪ್ರದರ್ಶನಗಳು ಬಹುದೂರ ಉಳಿದಿವೆ. ಇವುಗಳ ಮುಂದೆ ನಾವು ಪುಸ್ತಕಗಳಿಂದ ಓದಿ ತಿಳಿದುಕೊಳ್ಳುವ ಪ್ರಸಂಗಗಳು ಬರಬಹುದು.

ಸುಡುಗಾಡುಸಿದ್ದರು ತಮ್ಮ ಕೈಚಳಕದ ಆಟಕ್ಕೆ 'ಲಾಗ್ಮ' ಎಂದು ಕರೆಯುತ್ತಾರೆ. ಸಿದ್ದರ ಕೈಚಳಕದ ಭಂಡಾರವೇ ಆ ಜೋಳಿಗೆಯಲ್ಲಿ ಅಡಗಿರುತ್ತದೆ. ಸಿದ್ಧರ ಜೋಳಿಗೆಯ ಬಗ್ಗೆ ಅಪಾರ ಭಕ್ತಿ ಇದ್ದು, ಅವರ ಅಕ್ಷಯಪಾತ್ರೆ ಇದ್ದಂತೆ ಎಂದು ಹೇಳುತ್ತಾರೆ. ತಮಗೆ ಪ್ರದರ್ಶನಕ್ಕೆ ಬೇಕಾಗುವ ಸಾಮಾನುಗಳನ್ನೆಲ್ಲಾ ಈ ಜೋಳಿಗೆಯಲ್ಲಿ ಇಟ್ಟಿರುತ್ತಾರೆ.

ಸುಡುಗಾಡು ಸಿದ್ಧರ ಆಟಗಳು ಒಬ್ಬರು ಅಥವಾ ಸಹಾಯಕ್ಕಾಗಿ ಇನ್ನೊಬ್ಬರು

ಇರಬಹುದು. ಜನರನ್ನು ಬೆರಗು ಗೊಳಿಸುವುದರ ಸಲುವಾಗಿ ಆಟಕ್ಕೆ ತಲೆಬುರುಡೆ, ಗೊಂಬೆಗಳು, ಚೇಳು, ದುಂಡಗೆ ಸುತ್ತಿದ ಬೇರು ಮತ್ತು ಜೋಳಿಗೆಯ ಇನ್ನೊಂದು ಪೊದರಿನಲ್ಲಿ ಗಿಡಮೂಲಿಕೆಗಳು ಇರುತ್ತವೆ. ಜನರಿಗೆ ಕಣ್ಣು ತಪ್ಪಿಸುವ ಹಾಗೆ ಕೈಚಳಕದ ಮೂಲಕ ತೀವ್ರಗತಿಯಲ್ಲಿ ಆಟಗಳನ್ನು ಪ್ರದರ್ಶಿಸುತ್ತಾರೆ. ಜೋಳಿಗೆಯಿಂದ ವಿಚಿತ್ರವಾದ ಹಾಗೂ ಮನಸ್ಸೆಳೆಯುವ ವಸ್ತುಗಳನ್ನು ಹೊರಗೆ ಇಡುತ್ತಾರೆ. ನೋಡುಗರ ಮನಸ್ಸನ್ನು ಸೆಳೆಯಲು ಬಾಯೊಳಗಿಂದ ವಿಶಿಷ್ಟವಾದ ಶಬ್ದದಿಂದ ಚಿಂವ್ ಚಿಂವ್ ಎಂಬ ಧ್ವನಿ ಹೊರಡಿಸುತ್ತಿರುತ್ತಾರೆ. ಇವರ ಪ್ರದರ್ಶನ ಕಲೆ ಕೇವಲ ಆಟವೆ ಹೊರತು ಯಾವುದೇ ದುಷ್ಟ ತಾಂತ್ರಿಕ ಮಾಟಮಂತ್ರ ವಿಧಾನವಲ್ಲ. ಹಾಗೆಯೇ ನೋಡುಗರಿಗೆ ಇವರು ಮಾಯಾ, ಮಾಟಮಂತ್ರ ಮಾಡಿಸುವರು ಎಂದು ನಂಬುತ್ತಾರೆ. ಆದರೆ ಇವರು ಎಂದೂ ಇಂತಹ ಕೆಟ್ಟ ಕೆಲಸಕ್ಕೆ ಕೈಹಾಕುವವರಲ್ಲ. ಕೇವಲ ಕೈಚಳಕದಿಂದ ಜನರಿಗೆ ಚಮತ್ಕಾರ ರೀತಿಯಲ್ಲಿ ಆಟಗಳನ್ನು ಪ್ರದರ್ಶಿಸಿ ಸಂತೋಷಗೊಳಿಸುತ್ತಾರೆ.

ಸುಡುಗಾಡುಸಿದ್ಧರ ಆಟಕ್ಕೆ ಬೇಕಾಗುವ ವಸ್ತುಗಳು ಒಂದು ಜೋಳಿಗೆ, ಕೈಯಲ್ಲಿ ಸುರುಳಿ ಸುತ್ತಿದ ಚಿಗರೆ ಚರ್ಮ, ಲಿಂಬೆಹಣ್ಣು, ಅಡಿಗೆ ಗಜ, ಒಣಗಿದ ಹಾವಿನ ತಲೆ, ರಬರು, ಕೈಯಿಂದ ತಯಾರಿಸಿದ ಗೊಂಬೆಗಳು ಅವುಗಳಿಗೆ ಅಲಗೂರು ನಾಗಮ್ಮ, ಚೌಡಮ್ಮ, ಚೇಳು, ಗುಂಡಾಕಾರದ ಕಲ್ಲುಗಳು, ಬಾಣತಿ ಹಸ್ತ ಇದು ಕೇವಲ ಆಟಕ್ಕೆ ಮತ್ತು ಜನರಿಗೆ ಬೆರಗುಗೊಳಿಸುವುದು ಪ್ರದರ್ಶಿಸುವುದರ ಸಲುವಾಗಿ ಜೋಳಿಗೆಯಲ್ಲಿರುತ್ತವೆ. ಇವರ ಆಟಕ್ಕೆ ಸಮಯ ಹಾಗೂ ಸಂದರ್ಭಗಳು ಮುಖ್ಯವಲ್ಲ. ಪ್ರಮುಖ ಬೀದಿಗಳಲ್ಲಿ ಜನರು ಸೇರುವ ಸ್ಥಳವನ್ನು ಹಾಗೂ ಆಟಕ್ಕೆ ಯೋಗ್ಯವಾದ ಸ್ಥಳವೆಂದು ಗುರುತಿಸಿಕೊಂಡು ಪ್ರದರ್ಶನಕ್ಕೆ ತಯಾರಾಗುತ್ತಾರೆ. ಆಟಕ್ಕೆ ಮೊದಲು ದೇವರ ನಾಮಸ್ಮರಣೆ ಮಾಡುತ್ತಾ ಜನ ಸಮೂಹದ ನಡುವೆ ಕುಳಿತು ತನ್ನ ಕೈಚಳಕದಿಂದ ಜೋಳಿಗೆಯಲ್ಲಿದ್ದ ಒಂದೊಂದು ವಸ್ತುಗಳನ್ನು ಹೊರ ತೆಗೆದು ಮಾಯಾಮಾಡಿ ಬೇರೊಂದು ವಸ್ತುವನ್ನು ತೋರಿಸುವುದರ ಮೂಲಕ ಜನರನ್ನು ಬೆರಗುಗೊಳಿಸುತ್ತಾರೆ.

ಪ್ರದರ್ಶನದಲ್ಲಿ ತೋರಿಸುವ ವಿಶಿಷ್ಟ ಪಕ್ಷಿಯ ಹೆಸರು ಮಲ್ನಾಡದ ಚೌಡಿ. ಇವರು ಮಲ್ನಾಡದ ಚೌಡಿ ಎಂದು ಕೂಗಿದಾಗ ಅದು ಚಿಂವಕ್ ಎನ್ನುತ್ತದೆ. ಮಲ್ನಾಡದಾಗ ಇದ್ದೀಯಾ, ಚಿಂವಕ್. ಮಲ್ನಾಡ ಬಿಟ್ಟು ಬಂದ್ಯಾ, ಚಿಂವಕ್ ಎಂದು ಧ್ವನಿ ಬರುತ್ತದೆ. ಜೋಳಿಗೆಯಿಂದ ಒಂದು ಗಜ್ಜುಗ ತೆಗೆದು ಬಾಯಲ್ಲಿ ಹಾಕಿಕೊಂಡು ಮಾಯಾ ಮಾಡಿ ನಂತರದಲ್ಲಿ ಹತ್ತಾರು ಗಜ್ಜುಗಗಳನ್ನು ಬಾಯಿಂದ ಹೊರತೆಗೆಯುವುದು. ಗುಜ್ಜಗಳನ್ನು ಮೂಗಿನಲಿಟ್ಟು ಹೊಟ್ಟೆಯಿಂದ ಇಲ್ಲವೆ ಕಿವಿಯಿಂದ ತೆಗೆಯುವುದು. ನಾಣ್ಯಗಳನ್ನು ನೋಟುಗಳನ್ನಾಗಿ ಮಾಡುವುದು. ಗಾಜಿನ ಗುಂಡುಗಳಿಂದ ಬಸವಣ್ಣನನ್ನು ಮಾಡುವುದು, ಕಪ್ಪೆಯಿಂದ ನಾಶಿಡಬ್ಬೆ ಮಾಡುವುದು. ಕಪ್ಪು ಬೀಜಗಳಿಂದ ಅಂಗೈಯಿಂಡ ಲಿಂಗವನ್ನು ಮಾಡುವುದು. ಒಂದು ಕಲ್ಲುನುಂಗಿ ೧೦ ಕಲ್ಲುಗಳನ್ನು ತೆಗೆಯುವುದು. ಅಂಗೈಯಲ್ಲಿದ್ದ

ಲಿಂಗವನ್ನು ಮಾಯಾಮಾಡಿ ಈಶ್ವರನನ್ನಾಗಿ ಮಾರ್ಪಡಿಸುವುದು. ಹೀಗೆ ಅನೇಕ ಬಗೆಯ ಸದೃಶ್ಯಗಳನ್ನಾಗಿ ಮಾಡಿ ಬಗೆಬಗೆಯ ಆಟಗಳನ್ನು ಚಮತ್ಕಾರವನ್ನು ಮಾಡಿ ಪ್ರೇಕ್ಷಕರನ್ನು ರಂಜಿಸುತ್ತಾರೆ. ಇವರ ಈ ಕಲೆಯನ್ನು ಕೇವಲ ಮಾತುಗಳಿಂದ ವರ್ಣಿಸುವುದು ಅಸಾಧ್ಯ. ಈ ಆಟದ ಸವಿಯನ್ನು ಪ್ರತ್ಯಕ್ಷವಾಗಿ ಕಂಡು ಅನುಭವಿಸಬೇಕು. ಅನೇಕ ವಸ್ತುಗಳನ್ನು ಜೋಳಿಗೆಯಿಂದ ತೆಗೆದು ನೋಡುವಷ್ಟರಲ್ಲಿ ಬೇರೆ ಬೇರೆ ವಸ್ತುಗಳನ್ನು ತೋರಿಸುತ್ತಾರೆ. ಹೀಗೆ ಜನರನ್ನು ಬೆರಗುಗೊಳಿಸಿ ಕೂತುಹಲವನ್ನುಂಟು ಮಾಡುತ್ತಾ ಸಂದರ್ಭದ ಸನ್ನಿವಶಕ್ಕೆ ತಕ್ಕಂತೆ ಆಟದ ಮಧ್ಯದಲ್ಲಿ ಹಾಸ್ಯದ ಚಟಾಕಿಗಳಿಂದ ಮಲ್ಲಿ, ಮಲ್ಲಾಡ ಚೌಡಿ, ಬದ್ರಿ, ನಾಗಿ, ನಿಂಗಿ, ಸುಬ್ಬಿ ಎಂದು ಕೂಗಿದಾಗ ಚಿಂವಕ್ ಎಂದು ಪ್ರತಿಕ್ರಿಯಿಸುವ ಶಬ್ದದಿಂದ ಸಂತೋಷಪಡುತ್ತಾರೆ. ಜೊತೆಯಲ್ಲಿ ತಮ್ಮದೆ ಆದ ಧಾಟಿಯಲ್ಲಿ ಜನಪದ ಗೀತೆಗಳನ್ನು ಹೇಳುತ್ತಾರೆ.

ಜ್ಯಾ ಜ್ಯಾ ಜ್ಯಾ ಜ್ಯಾ
ಸಿದ್ದನಾಟ ಜೋಳಿಗ್ಯಾಗಂಥ
ವಕ್ಕಲಿಗನ ಆಟ ಹೊಲದಾಗಂತ
ಹೆಣ್ಣು ಮಕ್ಕಳಾಟ ಗಡಿಗ್ಯಾಗಂತ
ಸಾವುಕಾರನ ಆಟ ವ್ಯಾಪಾರದಾಗಂಥ
ಜ್ಯಾ ಜ್ಯಾ ಜ್ಯಾ ಜ್ಯಾ ...

ಮಲ್ಲಕ್ಕ, ಚಿಂವ್ ಚಿಂವ್ ಎಂಬ ವಿಶಿಷ್ಟವಾದ ಶಬ್ದ ಬರುತ್ತದೆ.

ಹಾಂ ಹಾಂ ಚೌಡಿ
ಕಡಿದಿ ಹಾಂ ಹಾಂ
ಭದ್ರಿ ಹಾಂ
ಚೌಡಿ ಹಾಂ
ಹೊಡೆದು ಬಿಡಿತಿನಿ ಹಾಂ
ಆಟ ಮಾಡತಿ, ಚಿಂವ್ ಚಿಂವ್
ಲಾಗಾ ಹೊಡಿತಿ, ಚಿಂವ್ ಚಿಂವ್
ಜ್ಯಾ ಜ್ಯಾ ಜ್ಯಾ ಜ್ಯಾ
ಉಪ್ಪು ಇಲ್ಲದೆ ಸಪ್ಪಂದು ತಿಂದು
ಏಳು ಸಾವಿರ ರೊಕ್ಕಗಳಿಸಿ
ಬಡವರ ಕಾಲು ಮುರಿದು
ಪಾಪಿ ಚಂಚಾಲಿ
ಇಲ್ಲೆ ಕುಂದುರು...

ಆ ಗ ಗ ಗ ಗ
ನೆರಸ ಮಗಳು ತುರಸಾಕ
ಕುಂತಲ್ಲಿ ಜಗಳ
ನಿಂತಲ್ಲಿ ಜಗಳ
ಹುಡುಗದ ಜಗಳ
ನೆರಮನಿ ಜಗಳ
ಜಗಳ ಸಿಕ್ಕರೆ ಉಣ್ಣೊದು
ಜಗಳ ಸಿಗದಿದ್ದರೆ ಉಪವಾಸ
ಮಲಗಬೇಕ
ಬಾಳಶ್ಯಾಣೆ ಇದ್ದಿ
ಇಲ್ಲೆ ಮುಲ್ಯಾಗ ಕುಂದುರು...

ಜ್ಯಾ ಜ್ಯಾ ಜ್ಯಾ ಜ್ಯಾ
ನಾಗಪ್ಪ, ಚಿಂವ್ ಚಿಂವ್
ಹೋ ಹೋ, ಚಿಂವ್ ಚಿಂವ್
ಸುಬಕ್ಕ, ಚಿಂವ್ ಚಿಂವ್
ಹೋ ಹೋ, ಚಿಂವ್ ಚಿಂವ್
ಹಾಂ ಹಾಂ, ಚಿಂವ್ ಚಿಂವ್
ಮಲ್ಲಿ, ಚಿಂವ್ ಚಿಂವ್
ಸುಬಕ್ಕ, ಚಿಂವ್ ಚಿಂವ್
ಸುಡುಗಾಡ ಮೂಲ್ಯಾಗ ಇದ್ಯಾ, ಚಿಂವ್ ಚಿಂವ್
ಲಾಗಾ ಹೊಡಿತ್ಯಾ, ಚಿಂವ್ ಚಿಂವ್
ಹಾಂ ಹಾಂ ಹಾಂ, ಚಿಂವ್ ಚಿಂವ್

ಜ್ಯಾ ಜ್ಯಾ ಜ್ಯಾ ಜ್ಯಾ
ಇದು ಎಲ್ಲಮ್ಮನ ಕವಡಿ
ಹೋಗು ಜೋಳಗ್ಯಾಗ ಹೋಗು
ಈ ಕಡಿ ಹಾಯ್ದಿ ಬಾ
ಲಕ್ಷ್ಮಿ ಲಕ್ಷ್ಮಿ
ಹರ ಹರ ಹರ ಲಕ್ಷ್ಮಿ
ಆದಿ ಲಕ್ಷ್ಮಿ ಜಲ್ಮ ಲಕ್ಷ್ಮಿ
ನೀ ಇಲ್ಲೆ ಕೂಡು

ಹೀಗೆ ಸಿದ್ದರ ಜೋಳಿಗೆಯಲ್ಲಿರುವ ಪ್ರತಿಯೊಂದು ವಸ್ತುಗಳನ್ನು ತೋರಿಸುತ್ತಾ ಆ ವಸ್ತುಗಳ ಮೇಲೆ ಪದಗಳನ್ನು ಹೇಳುತ್ತಾ ಕನಿಷ್ಠ ಒಂದು ತಾಸಿನವರೆಗೂ ಜನರನ್ನು ರಂಜಿಸುತ್ತಾರೆ. ಈ ರೀತಿ ಸುಡುಗಾಡು ಸಿದ್ಧರ ಆಟವನ್ನು ತೋರಿಸುತ್ತಾ ದೇವರ ಅನುಗ್ರಹದಿಂದ ಒಂದಿಷ್ಟು ಚಮತ್ಕಾರಗಳನ್ನು ಮಾಡಿ ಸಿದ್ದನಾಟ ಚಮತ್ಕಾರದ ಶಿವನ ಆಟ ಮಲ್ಲಾಡಿ ಚೌಡಿ ಆಟ ಎಂದು ಹೇಳುವದರ ಜೊತೆಗೆ ಎಲ್ಲಾ ದೇವರ ನಾಮಸ್ಮರಣೆ ಮಾಡುತ್ತಾ ದೇವರ ಹಾಡು ವಚನಕಾರರ ನುಡಿಗಳನ್ನು ಹೇಳುತ್ತಾ ಜನರಲ್ಲಿ ತನ್ನ ಬಗ್ಗೆ ಭಾವ, ಭಕ್ತಿ ಬರುವ ಹಾಗೆ ಮಾಡಿ ಜನರಿಂದ ಹಣ ಸಂಗ್ರಹಿಸಿ ನಂತರ ಹರಕೆ ಹೇಳಿ ಹರುಷತ್ತಾನೆ. ಇಂತಹ ಸನ್ನಿವೇಶದಲ್ಲಿ ದೇವರ ನಾಮಸ್ಮರಣೆಗಳಾದ

ರೇವಣ ಸಿದ್ದೇಶ್ವರನ ಬಗ್ಗೆ
ಕಪ್ಪತ್ತ ಮಲ್ಲಯ್ಯನ ಬಗ್ಗೆ
ಹೇಮರೆಡ್ಡಿಯಂತಹ ಮನೆಯಾಗಲಿ
ಮಕ್ಕಳ ಫಲ ಹಣದ ಶ್ರೀಮಂತಿಕೆ
ಶಿವನ ಹರಿಕೆಯಾಗಿ ಗೊಡಚಿ ವೀರಣ್ಣ ಹಂಪಿ ವೀರುಪಾಕ್ಷಪ್ಪ
ಕಟ್ಟಿದ ತೊಟ್ಟಿಲು ತೂಗಲಯ್ಯ ಸುಖವಾಗಲಿ
ಹಾಡಿ ಹರಿಸಲಯ್ಯ

ಎಂದು ಭಕ್ತಿ ಪೂರ್ವಕವಾಗಿ ಹರಕೆ ಹಾಕಿ ಜನರಲ್ಲಿ ಭಿಕ್ಷೆ ಸಂಗ್ರಹಿಸುತ್ತಾರೆ.

ಸಿದ್ದರಾಟ ಮಾಟ, ಮಂತ್ರ ಮಾಡುವವರೆಂದು ಕೆಲವೊಂದು ಜಿಲ್ಲೆಗಳಲ್ಲಿ ಭಯಭೀತರಾಗಿದ್ದಾರೆ. ಇದು ತಪ್ಪು ಕಲ್ಪನೆ ಇವರು ಮಂತ್ರ ತಂತ್ರ ಮಾಟ ಮಾಡಿಸುವಂತಹವರಿಲ್ಲ. ಕೇವಲ ತಮ್ಮ ಹೊಟ್ಟೆಯ ಉಪಜೀವನಕ್ಕಾಗಿ ಕೈಚಳಕದ ಪ್ರದರ್ಶನದಿಂದ ಜನರನ್ನು ಬೆರಗುಗೊಳಿಸುವ ಒಂದು ಕಲೆಯಾಗಿದೆ. ಇತ್ತೀಚಿನ ದಿನಗಳಲ್ಲಿ ಈ ಕಲೆಯನ್ನು ಹೊಂದಿದವರು ಸಿಗುವುದು ಕಠಿಣವಾಗಿದೆ. ಇನ್ನು ಹಿಂದಿನ ಜನರಲ್ಲಿ ಸ್ವಲ್ಪ ಮಟ್ಟಿಗೆ ಉಳಿದುಕೊಂಡು ಬಂದಿದೆ.

ಈ ಕಲೆಯನ್ನು ಉಳಿಸಿ ಬೆಳೆಸುವುದು ಮತ್ತು ಜೀವಂತವಾಗಿ ಇಡುವುದು ಸಾಮಾಜದ ಹಾಗೂ ಸರ್ಕಾರದ ಜವಾಬ್ದಾರಿಯಾಗಿದೆ. ಈ ಕಲೆಗಳನ್ನು ಇಳಿಸುವುದರ ಸಲುವಾಗಿ ಸುಡುಗಾಡು ಸಿದ್ದರ ಸಂಘಗಳು ಜಿಲ್ಲಾ ಜನಪದ ಮೇಳ, ಕಲಾ ಪ್ರದರ್ಶನಗಳಲ್ಲಿ ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಅಲ್ಲಲ್ಲಿ ಪ್ರದರ್ಶಿಸಿ ಕಲೆಯನ್ನು ಜೀವಂತಿಕೆಯಾಗಿ ಇಡಲು ಪ್ರಯತ್ನಿಸುತ್ತಿವೆ.

**ಜನಪದ ನೃತ್ಯ**

ಜನಪದ ಸಾಹಿತ್ಯವೆಂಬುವುದು ಆಯಾ ಸಮುದಾಯದಲ್ಲಿ ಒಬ್ಬರಿಂದ ಒಬ್ಬರಿಗೆ ಅದು ಹಾಡಿನ ರೂಪದಲ್ಲಾಗಲಿ ಒಬ್ಬರ ಬಾಯಿಂದ ಅನುಕರಣೆ ರೀತಿಯಲ್ಲಿ ಬಂದಿರುವ ಕಲೆಯಾಗಿದೆ. ದಿನಂಪ್ರತಿ ಜನರು ತಾವು ಕೆಲಸಗಳಲ್ಲಿ ತೊಡಗಿದಾಗ ಆದ ಸುಖ ದುಃಖಗಳ

ನಡುವಿನ ಅನುಭವಿಸಿದ ಅನುಭವಗಳನ್ನು ಹೃದಯ ತುಂಬಿ ಹೊರಹಾಕುತ್ತಾ ಬಂದಿದ್ದಾರೆ. ತಮ್ಮ ಪಾಡನ್ನೇ ಹಾಡಾಗಿ ನೀಡಿದ ಬಾಳಿನ ನೋವು ನಲಿವುಗಳನ್ನು ಸಾಹಿತ್ಯವಾಗಿಸಿಕೊಂಡು ಒಂದು ಅಪೂರ್ವ ಪ್ರಕಾರವಾಗಿದೆ(ಖಂಡೋಬಾ, ಪಿ ಕೆ: ೧೯೯೧:೨೦೦).

ಸುಡುಗಾಡು ಸಿದ್ದರು ತಮ್ಮಲ್ಲಿರುವ ಕಲೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಭಿಕ್ಷಾಟನೆ ಬಿಡುವಿನ ವೇಳೆಯಲ್ಲಿ ಬಲೆ ಹೆಣೆಯುವುದು ಬೇಟೆಯಾಡುವುದನ್ನು ಮಾಡುವರು. ಅಲ್ಲದೆ ಇವರು ಹಬ್ಬ ಹರಿದಿನಗಳಲ್ಲಿ ಜಾತ್ರೆ, ಉತ್ಸವ, ಮದುವೆ ಸಮಾರಂಭಗಳು ಸುಗ್ಗಿ ಸೋಬಾನ ಜೋಗುಳ ಹಾಡು ಮಗುವಿನ ಜನನ ಸಂದರ್ಭದಲ್ಲಿ ಇವರು ತಮ್ಮ ಕಲೆಗಳನ್ನು ಪ್ರದರ್ಶಿಸುತ್ತಾರೆ. ಸ್ತ್ರೀ-ಪುರುಷರು ಚಿಕ್ಕವರು ದೊಡ್ಡವರು ಎನ್ನದೆ ಎಲ್ಲರು ತಮ್ಮ ಕಲಾವಂತಿಕೆಯನ್ನು ಹಾಡಿನ ಮೂಲಕ ಕುಣಿತದ ಮೂಲಕ ತೋರಿಸುತ್ತಾರೆ. ಕೆಲವರು ಧಾರ್ಮಿಕ ಹಿನ್ನೆಲೆಯಲ್ಲಿ ಅವುಗಳನ್ನು ಪೋಷಿಸಿಕೊಂಡು ಬಂದಿದ್ದಾರೆ. ಮತ್ತೆ ಕೆಲವರು ಮನರಂಜನಾ ಮಾಧ್ಯಮವಾಗಿ ಉಳಿಸಿಕೊಂಡು ಬಂದಿದ್ದಾರೆ. ಇನ್ನು ಕೆಲವರು ಅದನ್ನು ವೃತ್ತಿ ಅಥವಾ ಉಪಜೀವನ ಮಾಧ್ಯಮವನ್ನಾಗಿ ಬೆಳಿಸಿಕೊಂಡು ಬಂದಿದ್ದಾರೆ(ಅದೇ:೧೭೩).

ಭಿಕ್ಷಾವೃತ್ತಿಯ ಸುಡುಗಾಡು ಸಿದ್ಧರು ಚಾಪೆ ಹೆಣೆಯುವುದು, ಗುಡಾರ ಮತ್ತು ಕೌದಿ ಹೊಲಿಯುವುದು, ಕಿರಿಟ ಸವಣ ತಯಾರಿಕೆ, ಬೇಟೆಯಾಡುವುದರ ಸಲುವಾಗಿ ಬಲೆ ಹಾಕುವುದು, ಚಿತ್ರಬಿಡಿಸುವುದು, ಶಂಖ ಮತ್ತು ನಪೂರಿ ನುಡಿಸುವಿಕೆ, ಹಚ್ಚೆಯ ಕಲೆ, ರಂಗೋಲಿ ಕಲೆ. ಇವರು ತಮ್ಮದೇ ಆದ ಕೆಲವು ಕ್ರೀಡೆಗಳು ಹಬ್ಬ ಹರಿದಿನಗಳಲ್ಲಿ ಜಾತ್ರೆ ಉತ್ಸವಗಳಲ್ಲಿ ಎಲ್ಲರು ಒಂದು ಕಡೆ ಸೇರಿ ಮನರಂಜನೆಗಾಗಿ ಹಾಡುವುದು, ಕುಣಿಯುವುದು, ಹೀಗೆ ತಮ್ಮ ಕಾಲೋನಿಗಳಲ್ಲಿಯೇ ಜನರನ್ನು ರಂಜಿಸುವ ಕಲೆಯನ್ನು ಮುಂದುವರೆಸಿಕೊಂಡು ಬಂದಿದಾರೆ.

ಕರ್ನಾಟಕದ ಸರ್ಕಾರದವರು ನಿಯೋಜಿಸಿದ ಜಾನಪದ ಮೇಳಗಳಲ್ಲಿ ಸುಡುಗಾಡು ಸಿದ್ಧರು ಭಾಗವಹಿಸಿ ತಮ್ಮ ಕಲೆಯನ್ನು ಪ್ರದರ್ಶಿಸಿದ್ದಾರೆ.

೧. ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳ ಜಾನಪದ ಮೇಳ ೧೯೭೭ರಲ್ಲಿ ಕನ್ನಡ ಸಂಸ್ಕೃತಿ ಇಲಾಖೆಯವರು ಏರ್ಪಡಿಸಿದ ಜಾನಪದ ಮೇಳದಲ್ಲಿ ಅಧ್ಯಕ್ಷರು ನಾರಾಯಣ ಮತ್ತು ಗೋರರು ಚೆನ್ನಬಸಪ್ಪನವರ ಸಲಹೆಯಂತೆ ಶ್ರೀ ಸಾರೆಪ್ಪ ಗಂಟಿ ಧಾರವಾಡ ಹಾಗೂ ಶ್ರೀ ದುರುಗಪ್ಪ ಕಿನ್ನುರಿ ಅರಬಾಂವಿ, ಭೀಮಪ್ಪ ಬೇವಿನಹಳ್ಳಿ ದ್ಯಾವನಕೊಪ್ಪ ಇವರುಗಳು ಈ ಮೇಳದಲ್ಲಿ ಭಾಗವಹಿಸಿ ತಮ್ಮ ಕಲೆಯನ್ನು ಪ್ರದರ್ಶಿಸಿದ್ದಾರೆ.

೨. ಮಾಜಿ ಮುಖ್ಯಮಂತ್ರಿ ಶ್ರೀ ವೀರಪ್ಪ ಮೋಯಲಿ ಇವರ ಸಮ್ಮುಖದಲ್ಲಿ ಧಾರವಾಡ ದಲ್ಲಿ ನಡೆದ ಜಾನಪದ ಮೇಳದಲ್ಲಿ ಕಲಾವಿದ ಹುಲಿಗೆಪ್ಪ ಗಂಟಿ ಧಾರವಾಡ ಹಾಗೂ ಸಾರೆಪ್ಪ ಗಂಟಿ ಧಾರವಾಡ ಜಾನಪದ ಮೇಳದಲ್ಲಿ ಭಾಗವಹಿಸಿ ಕಲಾಭವನದಲ್ಲಿ ಸುಡುಗಾಡು ಸಿದ್ಧರ ಕೈಚಳಕದ ಆಟವನ್ನು ಪ್ರದರ್ಶಿಸಿದ್ದಾರೆ.

೩. ಇಪ್ಪತ್ತೊಂದನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದಲ್ಲಿ ಕನ್ನಡ

ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ದಿ. ೨೪, ೨೫ ಫೆಬ್ರವರಿ ೧೯೯೪ರಲ್ಲಿ ನಡೆದ ಜಾನಪದ ಮೇಳದಲ್ಲಿ ಶ್ರೀ ಹುಲಿಗೆಪ್ಪ ಗಂಟಿ, ಬಸಪ್ಪ ಕಿನ್ನೂರಿ ಸಾ. ಮುನವಳ್ಳಿ ಇವರು ಭಾಗವಹಿಸಿ ತಮ್ಮ ಕಲೆಯನ್ನು ಪ್ರದರ್ಶಿಸಿದ್ದಾರೆ.

೪. ಕನ್ನಡ ಸಂಸ್ಕೃತಿ ಇಲಾಖೆ ಧಾರವಾಡ ೧೪.೪.೧೯೯೪ ರಲ್ಲಿ ನಡೆದ ಡಾ. ಮಲ್ಲಿಕಾರ್ಜುನ ಮನ್ಸೂರ ಕಲಾಭವನ ಧಾರವಾಡ. ಜಾನಪದ ಮೇಲದಲ್ಲಿ ಶ್ರೀ ಮರಿಯಪ್ಪ ಗಂಟಿ ಮತ್ತು ಶ್ರೀ ಹುಲಿಗೆಪ್ಪ ಗಂಟಿ ಧಾರವಾಡ ಇವರು ಭಾಗವಹಿಸಿ ಕಲೆಯನ್ನು ಪ್ರದರ್ಶಿ ಸಿದ್ದಾರೆ.

೫. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು ಹಾಗೂ ಕೊಪ್ಪಳ ಜಿಲ್ಲಾ ಸುಡುಗಾಡು ಸಿದ್ಧರ ಸಂಘ ಕೊಪ್ಪಳ ಸಹಯೋಗದಲ್ಲಿ ವಿಚಾರ ಸಂಕೀರಣ ಹಾಗೂ ಸುಡುಗಾಡು ಸಿದ್ದರ ಕಲಾಪ್ರದರ್ಶನವನ್ನು ೯ ಮಾರ್ಚ್, ೨೦೦೭ರಂದು ಸಾಹಿತ್ಯ ಭವನ ಕೊಪ್ಪಳದಲ್ಲಿ ಜರುಗಿಸಲಾಗಿದೆ. ಇದರಲ್ಲಿ ಭಾಗವಹಿಸಿದ ಕಲಾವಿದರು ಶ್ರೀ ನಾಗಪ್ಪ ಹಾವಿನಗಂಟಿ ಸಾ. ಮಾಟಲಿದಿನ್ನಿ, ಶ್ರೀ ಸಣ್ಣ ಹುಲಿಗೆಪ್ಪ ಸಂಕದ ಸಾ. ಮಾಟಲಿದಿನ್ನಿ, ಶ್ರೀ ಹನುಮಂತಪ್ಪ ಸತಾಸಿಂಗ ಸಾ. ಬಸಿರಾಳ, ಶ್ರೀ ಗಂಗಪ್ಪ ಗಂಟಿ ಸಾ. ಕಲಿಕೇರಿ, ಶ್ರೀ ಸಾಕೆಪ್ಪ ಒಂಟೆತ್ತಿನವರು ಸಾ. ಕಲಿಕೇರಿ, ಗ್ಯಾನಪ್ಪ ವಲಾತ್ರಿ ಸಾ. ತಾಳಕನಕಾಪುರ, ಶ್ರೀ ಮಲ್ಲೇಶೀ ಕೂಗಡಿ ಸಾ. ಬುಡಿಶೆಟ್ನಾಳು.

೬. ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾಲಯದವರು ನಡೆಸಿದ ಜಾನಪದ ಮೇಳ ಅಗಸ್ಟ್ ೨೦೦೭ರಲ್ಲಿ ಭಾಗವಹಿಸಿದ ಕಲಾವಿದರು ಶ್ರೀ ಸಣ್ಣ ಶಿವಪ್ಪ ಒಂಟೆತ್ತಿನವರು ಹಾಗೂ ಶ್ರೀ ಗಂಗಪ್ಪ ಗಂಟಿ ತಮ್ಮಗಳ ಕಲೆಯನ್ನು ಪ್ರದರ್ಶಿಸಿದರು.

೭. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಅನಂತಶಯನ ಗುಡಿಯ ೭ನೇ ವಾರ್ಡಿನ ಆಂಜನೇಯ ದೇವಸ್ಥಾನದ ಹಿಂದಿನ ಬಯಲಿನಲ್ಲಿ ಹತ್ತಾರು ವರ್ಷಗಳಿಂದ ಸುಡುಗಾಡುಸಿದ್ಧ ಸಮುದಾಯಗಳ ನೂರಾರು ಕುಟುಂಬಗಳು ಗುಡಾರಗಳಲ್ಲಿ ದಮನೀಯವಾಗಿ ವಾಸಿಸುತ್ತಿವೆ. ಕರಕುಶಲ ಕಲೆ, ಜನಪದ ಕಲೆ, ಧಾರ್ಮಿಕ ಭಿಕ್ಷೆಯಂತಹ ಕಸುಬುಗಳನ್ನು ಇಲ್ಲಿಯವರು ಅವಲಂಬಿಸಿರುವರು. ಇವರಲ್ಲಿಯ ಸುಡುಗಾಡು ಸಿದ್ಧ ಸಮುದಾಯದ ವಿರುಪಾಕ್ಷಪ್ಪ ದ್ಯಾಮಪ್ಪ ಕಲ್ಯಾಣದವರು , ಶೇಖಪ್ಪ ನಲ್ಲಚೌಡಪ್ಪ ಕಲ್ಯಾಣದವರು,ಮಾರುತಿ ಧರ್ಮಪ್ಪ ಮದ್ದಿಯವರು,ಹುಲಗಪ್ಪ ದುರುಗಪ್ಪ ಮದ್ದಿಯವರು, ಮರಿಯಪ್ಪ ದುರುಗಪ್ಪ ಬೆಲ್ಲದವರು,ಧರ್ಮಪ್ಪ ಕೊಟ್ರಪ್ಪ ಬೆಲ್ಲದವರು, ಮಹೇಶಪ್ಪ ಸಣ್ಣ ದುರುಗಪ್ಪ ಮೋಡಿಮಿ ಅವರುಗಳು ಸಿದ್ಧರ ಕಲೆಯನ್ನು ಪ್ರದರ್ಶಿಸುತ್ತ ತಮ್ಮ ಬದುಕನ್ನು ದಮನೀಯವಾಗಿ ಸಾಗಿಸುತ್ತಲಿರುವರು.ಇವರೆಲ್ಲರೂ ಹಲವಾರು ಕಲಾ ಮೇಳಗಳಲ್ಲಿ ಭಾಗವಹಿಸಿ ಸಮುದಾಯದ ಮುಖ್ಯ ಕಲೆಯಾದ ಕೈಚಳಕ ಕಲೆಯನ್ನು ಪ್ರದರ್ಶಿಸಿದ್ದಾರೆ.

## ರಂಗಭೂಮಿ

ಭಿಕ್ಷಾವೃತ್ತಿಗಳಾದ ಸುಡುಗಾಡು ಸಿದ್ದರು ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಮನರಂಜನೆಗಾಗಿ ತಮ್ಮ ಗ್ರಾಮಗಳಲ್ಲಿ ಕೆಲವು ಕ್ರೀಡೆಗಳನ್ನು ಏರ್ಪಡಿಸಿ ಭಾಗವಹಿಸುವರು.

ಇತ್ತೀಚೆಗೆ ಒಂದೆಡೆ ನೆಲೆಸಿದ ಸುಡುಗಾಡುಸಿದ್ದರು ಸಂಘಗಳನ್ನು ರಚಿಸಿಕೊಂಡಿದ್ದಾರೆ. ಗ್ರಾಮದ ಯುವಕರು ಯುವಕ ಸಂಘಗಳನ್ನು ರಚಿಸಿಕೊಂಡು ಯವಕರು ಬಿಡುವಿನ ವೇಳೆಯಲ್ಲಿ ಹಾಗೂ ಸಂಜೆಯಲ್ಲಿ ಭಜನೆ ಮತ್ತು ನಾಟಕಗಳನ್ನು ತರಬೇತಿ ಮಾಡುತ್ತಾರೆ. ತರಬೇತಿ ಮಾಡಿಕೊಂಡು ಜಾತ್ರೆ, ಹಬ್ಬಗಳಲ್ಲಿ ಇವುಗಳನ್ನು ಪ್ರಯೋಗಮಾಡುವುದುಂಟು. ಅಲ್ಲದೆ ಭಜನೆಗೆ ಬೇಕಾದ ಹಾರ್ಮೋನಿಯಂ, ತಬಲಾ, ಡೋಲಕ್ ಇನ್ನಿತರ ವಸ್ತುಗಳನ್ನು ಬಳಸಿಕೊಳ್ಳುತ್ತಾರೆ. ಸುಡುಗಾಡು ಸಿದ್ಧರು ತಮ್ಮಲ್ಲಿರುವ ಕಲೆಯನ್ನು ಪ್ರದರ್ಶಿಸುವುದರ ಸಲುವಾಗಿ ಒಂದು ವೇದಿಕೆಯನ್ನು ಮಾಡಿಕೊಂಡಿರುತ್ತಾರೆ. ಕಾಲೋನಿಯ ಬಯಲು ಪ್ರದೇಶವನ್ನು ಈ ಆಟಕ್ಕೆ ರಂಗಭೂಮಿಯಾಗಿ ಗುರುತಿಸಿಕೊಂಡು ಗ್ರಾಮಸ್ಥರ ಎದುರಿಗೆ ತಾವು ಅಭ್ಯಸಿಸಿದಂಥ ಕಲೆಯನ್ನು ಪ್ರದರ್ಶಿಸಿ ಮನರಂಜನೆಯನ್ನು ನೀಡುತ್ತಾರೆ. ಇಲ್ಲಿ ಎಲ್ಲರು ಉತ್ಸುಕತೆಯಿಂದ ಭಾಗವಹಿಸುವರು. ಸಿದ್ಧರ ಪ್ರದರ್ಶನದಲ್ಲಿ ತಾವು ಪ್ರದರ್ಶಿಸುವ ಸ್ಥಳವೇ ರಂಗಭೂಮಿಯಾಗುತ್ತದೆ. ಇದಕ್ಕಾಗಿ ವಿಶಿಷ್ಟ ರಂಗದ ಅವಶ್ಯಕತೆ ಇರುವುದಿಲ್ಲ.

## ಜನಪದ ಕ್ರೀಡೆಗಳು

ಭಿಕ್ಷಾವೃತ್ತಿಯ ಸುಡುಗಾಡು ಸಿದ್ಧರು ತಮ್ಮದೇ ಆದ ಕೆಲವು ಕ್ರೀಡೆಗಳನ್ನು ಹೊಂದಿರುವರು. ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಎಲ್ಲರೂ ಕೂಡಿ ಒಂದೆಡೆ ಸೇರಿ ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಮನರಂಜನೆಗಾಗಿ ಆಟಗಳನ್ನು ಆಡುವರು. ಕ್ರೀಡೆಗಳಲ್ಲಿ ಆಸಕ್ತಿ ಕಡಿಮೆ ಮತ್ತು ಸಂಪೂರ್ಣವಾಗಿ ಇಲ್ಲವೆಂದು ಹೇಳಲಾಗುವುದಿಲ್ಲ. ಇವರು ತಮ್ಮ ದೈನಂದಿನ ಚಟುವಟಿಕೆಗಳಲಹಾಗೂ ಬಿಡುವಿನ ವೇಳೆಯಲ್ಲಿ ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಗ್ರಾಮದ ಸುತ್ತ ಮುತ್ತಲಿನಲ್ಲಿ ಕ್ರೀಡೆಗಳು ನಡೆದರೆ ಆ ಗ್ರಾಮಗಳಿಗೆ ಹೋಗಿ ಅವರ ಜೊತೆ ಆಟಗಳಲ್ಲಿ ಸ್ಪರ್ಧಿಸಲು ಭಾಗವಹಿಸುತ್ತಾರೆ. ಹಲವಾರು ಪ್ರಾದೇಶಿಕ ಕ್ರೀಡೆಗಳ ಅನುಕರಣೆಯಿಂದಲೂ ಕಾಡು ಪ್ರಾಣಿಗಳಂತೆ ಅನುಕರಿಸಿಯೂ, ಹಾಡು, ಕುಣಿತ, ಮಣ್ಣಾಟ, ಹರಳಾಟ, ಕುಂಟಾಟ, ಎಳೆದಾಟ, ಮುಟ್ಟಾಟ, ಈ ಮೊದಲಾದ ಕ್ರೀಡೆಗಲಿಂದ ನಕ್ಕು ನಲಿದು ಸಂತೋಷಪಡುತ್ತಾರೆ.

ಸುಡುಗಾಡು ಸಿದ್ಧರು ತಮ್ಮ ವಿಶ್ರಾಂತಿ ಸಮಯದಲ್ಲಿ ಬೆಳದಿಂಗಳಾಟ, ಸಮವಯಸ್ಕರೊಂದಿಗೆ ಲಗೋರಿ ಆಟ, ಹೆಣ್ಣು ಮಕ್ಕಳು ಕುಂಟಪಿಲ್ಲೆ, ಕಲ್ಲಾಟ, ಕಣ್ಣುಮುಚ್ಚಾಲೆ, ಇತ್ಯಾದಿ ಆಟಗಳನ್ನು ಆಡುತ್ತಾರೆ.

ನಿರ್ದಿಷ್ಟ ಹಬ್ಬಗಳಲ್ಲಿ ಟಗರಿನ ಕಾಳಗ, ಹುಂಜದ ಕಾಳಗ ಹಾಗೂ ಕಸರತ್ತಿನ ಆಟಗಳನ್ನು ಆಡುತ್ತಾರೆ. ಈ ಪಂದ್ಯಗಳನ್ನು ಪಣಕಟ್ಟಿ ಆಡುತ್ತಾರೆ. ಕೋಳಿ ಮತ್ತು ಟಗರಿನ ಆಟಗಳಿಗೆ ವಿಶೇಷ ತಳಿಗಳ ಪ್ರಾಣಿಗಳನ್ನು ಪೋಷಿಸಿ ಅವುಗಳಿಗೆ ತರಬೇತಿ ನೀಡಿ ಪಣಕಟ್ಟಿದ ಆಟಗಳಲ್ಲಿ ಆಡಿಸುತ್ತಾರೆ. ಹೀಗೆ ತಮ್ಮ ಸಾಮಾಜಿಕ ಹಿನ್ನೆಲೆಯೊಳಗೆ ಕ್ರೀಡೆಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ.

